# ಎಂ.ಫಿಲ್ ಪದವಿಯ ಸಂಪ್ರಬಂಧ

## ಡಾ: ಎಂ.ಎಂ. ಕಲಬುರ್ಗಿಯವರು ಹಸ್ತಪ್ರತಿಶಾಸ್ತ್ರಕ್ಕೆ ನೀಡಿದ ಕೊಡುಗೆ


ಸಂಶೋಧನ ವಿದ್ಯಾರ್ಥಿ

**ಸುಜಾತ .ಎಸ್.**

ಮಾರ್ಗದರ್ಶಕರು

**ಪ್ರೊ: ಶ್ರೀನಿವಾಸ ಶರ್ಮ**





ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು

ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ
ಮೂಲಕ
ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸಿದೆ

2007

502

# ಎಂ.ಫಿಲ್ ಪದವಿಯ ಸಂಪ್ರಬಂಧ

## ಡಾ: ಎಂ.ಎಂ. ಕಲಬುರ್ಗಿಯವರು ಹಸ್ತಪ್ರತಿ ಶಾಸ್ತ್ರಕ್ಕೆ ನೀಡಿದ ಕೊಡುಗೆ


ಸಂಶೋಧನ ವಿದ್ಯಾರ್ಥಿ

**ಸುಜಾತ .ಎಸ್.**

ಮಾರ್ಗದರ್ಶಕರು

**ಪ್ರೊ: ಶ್ರೀನಿವಾಸ ಶರ್ಮ**










ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು

ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ


ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದೆ

2007

ಸಂಚಾಲಕರು
ಎಂ. ವಿ. ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ. ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ
ಬೆಂಗಳೂರು-560 019.

# ಅಭ್ಯರ್ಥಿಯ ಪ್ರಮಾಣ ಪತ್ರ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ 2006-07 ನೇ ಸಾಲಿನ ಎಂ.ಫಿಲ್. ಪದವಿಗಾಗಿ 'ಡಾ: ಎಂ.ಎಂ. ಕಲಬುರ್ಗಿಯವರು ಹಸ್ತಪ್ರತಿ ಶಾಸ್ತ್ರಕ್ಕೆ ನೀಡಿದ ಕೊಡುಗೆ' ಸಂಪ್ರಬಂಧವನ್ನು ಪ್ರೊ: ಶ್ರೀನಿವಾಸ ಶರ್ಮ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದೇನೆ.

ಈ ಸಂಪ್ರಬಂಧ ನನ್ನ ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ: 16.8.07 ಸಹಿ : Sujatha S

ಸ್ಥಳ: ಬೆಂಗಳೂರು. (ಹೆಸರು : **ಸುಜಾತ .ಎಸ್**)

# ಮಾರ್ಗದರ್ಶಕರ ಪ್ರಮಾಣ ಪತ್ರ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ 2006-07 ನೇ ಸಾಲಿನ ಎಂ.ಫಿಲ್. ಪದವಿಗಾಗಿ 'ಡಾ: ಎಂ.ಎಂ. ಕಲಬುರ್ಗಿಯವರು ಹಸ್ತಪ್ರತಿ ಶಾಸ್ತ್ರಕ್ಕೆ ನೀಡಿದ ಕೊಡುಗೆ' ಸಂಪ್ರಬಂಧವನ್ನು ಸುಜಾತ.ಎಸ್. ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ.

ಈ ಸಂಪ್ರಬಂಧ ವಿದ್ಯಾರ್ಥಿಯ ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಬೇರೆಲ್ಲೂ ಪ್ರಕಟಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ: 17.8.07 ಸಹಿ : ಪ್ರೊ. ಎಚ್. ವಿ. ಶ್ರೀನಿವಾಸಶರ್ಮ

ಸ್ಥಳ : ಬೆಂಗಳೂರು (ಹೆಸರು :(ಪ್ರೊ: ಎಚ. ವಿ.ಶ್ರೀನಿವಾಸ ಶರ್ಮ)

# ಪ ರಿ ವಿ ಡಿ

## ಅಧ್ಯಾಯ – 1

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಭರತ ಖಂಡದ ಅಖಂಡ ಪರಂಪರೆಯಲ್ಲಿ ಕರ್ನಾಟಕದ ಹಸ್ತಪ್ರತಿಗಳಿಗೆ ಸಂಸ್ಕೃತ, ಪ್ರಾಕೃತ ಮತ್ತು ತಮಿಳು ಹಸ್ತಪ್ರತಿಗಳ ತರುವಾಯ ಸ್ಥಾನ ಸಲ್ಲುತ್ತದೆ. ಕನ್ನಡ ನಾಡಿನ ಜನತೆ ಬರೆಯಿಸುವುದರ ಮೂಲಕ ಪೋಷಕರಾಗಿ ಬರೆಯುವುದರ ಮೂಲಕ ಬರೆಪಕಾರರಾಗಿ ಹಸ್ತಪ್ರತಿ ನಿರ್ಮಾಣ ಕಾರ್ಯವನ್ನು ಜೀವಂತವಾಗಿಟ್ಟು ನಮ್ಮ ನಾಡನ್ನು ಅಪಾರವಾದ ಹಸ್ತಪ್ರತಿ ಭಂಡಾರವನ್ನಾಗಿಸಿದ್ದಾರೆ.

[1] "ಈಗ ಈ ಹಸ್ತಪ್ರತಿಗಳಿಂದ ಕವಿ ಚರಿತೆಗೆ, ನಾಡಿನ ಇತಿಹಾಸಕ್ಕೆ ಪ್ರಯೋಜನವಿದೆ. ಕನ್ನಡಿಗರ ವಿದ್ಯಾಭಿಮಾನ, ಧರ್ಮಾಬಿಮಾನದ ಹೆಜ್ಜೆಗಳನ್ನು ಇವುಗಳಿಂದ ಗುರುತಿಸಿಕೊಳ್ಳುವ ಸಾಧ್ಯತೆಗಳಿವೆ. ಹಸ್ತಪ್ರತಿಗಳ ನಿರ್ಮಾಣ ವಿಧಾನ, ನಿರ್ಮಾತೃಗಳ ಜೀವನ–ವೃತ, ದಾನಿಗಳ ಪರಿಗ್ರಾಹಕರ ಉದ್ದೇಶಗಳನ್ನು ತಿಳಿದುಕೊಳ್ಳಬಹುದಾಗಿದೆ.

"ಕನ್ನಡಿಗರ ಸಾಂಸ್ಕೃತಿಕ ಜೀವನದ ಕೆಲ ಮುಖಗಳನ್ನಾದರೂ ಇವು ಪ್ರತಿಫಲನಗೊಳಿಸುತ್ತವೆ ಎಂಬ ಹೊಸ ವಿಚಾರಗಳು ವಿದ್ವಾಂಸರಲ್ಲಿ ಅಂಕುರಿಸಿವೆ. ಈ ಹೊಸ ಆಲೋಚನೆಗಳು ಮುಂದೆ ಸ್ವರೂಪ ತಾಳಲಿರುವ ಹಸ್ತಪ್ರತಿಶಾಸ್ತ್ರದ ಕೆಲವು ಮುಖಗಳನ್ನು ಕಂಡುಕೊಳ್ಳಲು ಅನುವು ಮಾಡಿಕೊಟ್ಟಿವೆ."[1]

ಈ ಹಸ್ತಪ್ರತಿಗಳ ಬಗೆಗೆ ಕಲಬುರ್ಗಿಯವರಿಗಿಂತ ಮೊದಲು ಡಾ: ಆರ್.ಸಿ. ಹಿರೇಮಠರು ಹಸ್ತಪ್ರತಿ ಸಂಗ್ರಹ, ಅವುಗಳ ಸೂಚೀ ರಚನೆ ಮುಂತಾದವುಗಳನ್ನು ಒಳಗೊಂಡಂತೆ "Manuscriptology" ಎಂಬ ಶಾಸ್ತ್ರ ಬೆಳೆಯಬೇಕೆಂದು 1974 ರಲ್ಲಿ ನುಡಿದರು. 1977 'ಕನ್ನಡ ಹಸ್ತಪ್ರತಿಗಳ ಇತಿಹಾಸ' ವನ್ನು ಎಚ್.ವಿ. ದೇವಿರಪ್ಪನವರು ಹಸ್ತಪ್ರತಿಶಾಸ್ತ್ರಕ್ಕೆ ಬೇಕಾದ ಸಾಮಗ್ರಿಗಳನ್ನು ಕಲೆ ಹಾಕಿದರೆ, ಆನಂತರ, 1981 ರಲ್ಲಿ ನಡೆದ ವಿಚಾರಗೋಷ್ಠಿಗಳಲ್ಲಿ ಡಾ: ಕಲಬುರ್ಗಿಯವರು "ಹಸ್ತಪ್ರತಿಶಾಸ್ತ್ರ ; ಅವರ ವಿವಿಧ ಮುಖಗಳು" ಮತ್ತು "ಹಸ್ತಪ್ರತಿ ಕ್ಷೇತ್ರಕಾರ್ಯ: ವಿಧಾನ–ಸಾಧನೆ" ಎಂಬ ಲೇಖನಗಳನ್ನು ಸಾದರಪಡಿಸುವ ಮೂಲಕ ಹಸ್ತಪ್ರತಿ ಶಾಸ್ತ್ರ ಕಟ್ಟಡಕ್ಕೆ ನೀಲ ನಕ್ಷೆಯನ್ನು ಸಿದ್ಧಪಡಿಸಿಕೊಟ್ಟರು ಎಂದರೆ ತಪ್ಪಾಗಲಾರದು.

[2]"ಡಾ: ಕಲಬುರ್ಗಿಯವರು ತಮ್ಮ "ಹಸ್ತಪ್ರತಿಗಳು; ಅದರ ವಿವಿಧ ಮುಖಗಳು" ಎಂಬ ಲೇಖನದಲ್ಲಿ ಇನ್ನುಳಿದ ಬರಹದ ದಾಖಲೆಗಳಿಂದ ಹಸ್ತಪ್ರತಿಗಳನ್ನು ಬಿಡಿಸಿ ತೋರಿಸುವ ಮೊದಲ ಪ್ರಯತ್ನ ಮಾಡಿದವರು. ಹಸ್ತಪ್ರತಿಯೆಂದರೇನು? ಎಂಬ ಪ್ರಶ್ನೆಯನ್ನೆತ್ತಿ "ತಲೆಮಾರಿನಿಂದ ತಲೆಮಾರಿಗೆ ಸಾಗಿಬಂದ ಭೌತಿಕ ಮತ್ತು ಸಾಂಸ್ಕೃತಿಕ ಜ್ಞಾನ ಸಂಪತ್ತು ಒಂದು ಕಾಲಕ್ಕೆ ಶ್ರುತಿ

ಪಾತಳಿಯಿಂದ ಲಿಪಿ ಮಾಧ್ಯಮದ ಮೂಲಕ ಕೃತಿ ಪಾತಳಿಗೆ ಇಳಿದು ಬಂದಿತು. ಮುಂದೆ ಈ ಕೃತಿ ಸಾಹಿತ್ಯ ಅಲ್ಪಕಾಲದಲ್ಲಿ ಅಳಿದು ಹೋಗುವ, ಬಹುಕಾಲ ಉಳಿದು ನಿಲ್ಲುವ ವರ್ಗದಲ್ಲಿಯೇ ಶಿಲೆ, ಸುಟ್ಟ ಮಣ್ಣು, ಲೋಹಫಲಕಗಳಂಥ ಭಾರವಾದ ವಸ್ತುವಲ್ಲದ ವಸ್ತ್ರಪಟ, ವೃಕ್ಷಪತ್ರ, ಕಾಗದಗಳಂಥ ಹಗುರ ವಸ್ತುಗಳ ಮೇಲಿನ ಕೈ ಬರಹಗಳು ಮಾತ್ರ ಹಸ್ತಪ್ರತಿಗಳ ವರ್ಗದಲ್ಲಿ ಸೇರುತ್ತವೆ" ಎಂದು ಹೇಳುವಲ್ಲಿ ಹಸ್ತಪ್ರತಿ ವ್ಯಾಖ್ಯೆಯ ಸ್ವರೂಪದ ಸುಳಿವನ್ನಿತ್ತಿದ್ದಾರೆ."[2]

[3]"ಡಾ: ಎಂ.ಎಂ. ಕಲಬುರ್ಗಿಯವರು ಮಾತುಗಳನ್ನು ಗಮನಿಸುವುದಾದರೆ 1972 ರಲ್ಲಿ ನಾನು ಬರೆದ 'ಕನ್ನಡ ಗ್ರಂಥಸಂಪಾದನಶಾಸ್ತ್ರದ' ಒಡಲಲ್ಲಿ 'ಹಸ್ತಪ್ರತಿಶಾಸ್ತ್ರ'ದ ಬೀಜ ಬಿತ್ತಲಾಗಿದ್ದಿತು. 1981 ರಲ್ಲಿ ಬೆಂಗಳೂರಿನ ಬಿ.ಎಂ.ಶ್ರೀ ಪ್ರತಿಷ್ಠಾನ ಯೋಜಿಸಿದ್ದ ವಿಚಾರ ಸಂಕಿರಣದಲ್ಲಿ ಮಂಡಿಸಿದ್ದ 'ಹಸ್ತಪ್ರತಿಶಾಸ್ತ್ರ; ವಿವಿಧ ಮುಖಗಳು' ಹೆಸರಿನ ನನ್ನ ಲೇಖನದಲ್ಲಿ ಈ ಶಾಸ್ತ್ರದ ಭ್ರೂಣ ಆಕಾರ ಪಡೆದಿದ್ದಿತು. ಅದು ಈಗ ಸ್ವತಂತ್ರ ಕೃತಿ ರೂಪದಲ್ಲಿ ಅವತರಿಸುತ್ತಿದೆ. "ಈ ವರೆಗೆ (ಹಸ್ತಪ್ರತಿ) ಶಾಸ್ತ್ರ ರೂಪದ ಪೂರ್ಣ ಪ್ರಮಾಣದ ಗ್ರಂಥ ಪ್ರಕಟಗೊಂಡಿಲ್ಲ'' ಎಂಬ ವಿದ್ವಾಂಸರ ವಿಷಾದಕ್ಕೆ ಉತ್ತರವಾಗಿ ಹೊರಬರುತ್ತಲಿರುವ ಈ ಕೃತಿ, ಕನ್ನಡದಲ್ಲಿ ಪ್ರಥಮ ಪ್ರಯತ್ನವೆಂದೇ ಹೇಳಬೇಕು."[3]

'ಹಸ್ತಪ್ರತಿಶಾಸ್ತ್ರ' ಎಂಬ ಗ್ರಂಥವನ್ನು ಹೊರ ತಂದ ಕಲಬುರ್ಗಿಯವರ ಹಸ್ತಪ್ರತಿಶಾಸ್ತ್ರಕ್ಕೆ ಏನು ಕೊಡುಗೆಯನ್ನಿತ್ತಿದ್ದಾರೆ ಎಂಬುದನ್ನು ತಿಳಿಯುವುದು ಈ ಸಂಪ್ರಬಂಧದ ಉದ್ದೇಶವಾಗಿದೆ. ಪಾಶ್ಚಾತ್ಯ ನಾಗರಿಕತೆಯ ಪ್ರವೇಶದಿಂದ ಮುದ್ರಣ ಯಂತ್ರಗಳ ಪರಿಚಯವಾಗಿ ಆ ಮೂಲಕ ಮುದ್ರಿತ ಕೃತಿಗಳು ಯಾವುದೇ ಆಯಾಸವಿಲ್ಲ, ಪರಿಶ್ರಮವಿಲ್ಲದೆ ನಮಗೆ ಲಭ್ಯವಾಗುತ್ತದೆ. ಅವುಗಳಿಗೆ ಮೂಲವಾಗಿದ್ದ ಹಸ್ತಪ್ರತಿಗಳು ಅಲಕ್ಷಕ್ಕೆ ತುತ್ತಾದವು. ನಮ್ಮ ಪೂರ್ವಜರು ಸಂಗ್ರಹಿಸಿದ ಹಸ್ತಪ್ರತಿಗಳನ್ನು ಅಟ್ಟಕ್ಕೆ ಏರಿಸಲಾಯಿತು, ಕೆಲವು ನೀರು ಪಾಲಾದವು. ಇನ್ನು ಕೆಲವು ಒಲೆಗಿಕ್ಕಿದರೆ ಮತ್ತೆ ಕೆಲವು ಹುತ್ತಗಟ್ಟುತ್ತ ಗೆದ್ದಲು ತಿಂದು ತೇಗಿದವು. ಇಂತಹ ಸಂದರ್ಭದಲ್ಲಿ ಕೆಲವು ಆಸಕ್ತ ವಿದ್ವಾಂಸರು, ವಿಶ್ವವಿದ್ಯಾಲಯಗಳು, ಮಠಮಾನ್ಯಗಳು, ಹಸ್ತಪ್ರತಿಗಳನ್ನು ಸಂಗ್ರಹಿಸಿ, ಸಾಧ್ಯವಾದಷ್ಟು ಜಾಗರೂಕತೆಯಿಂದ ಕಾಪಾಡಲು ಮುಂದಾದರು. ಹಲವಾರು ಕೃತಿಗಳನ್ನು ಶಾಸ್ತ್ರೀಯವಾಗಿ ಸಂಪಾದಿಸಿಕೊಟ್ಟರು ಅಂತಹವರಲ್ಲಿ ಡಾ: ಕಲಬುರ್ಗಿಯವರು ಒಬ್ಬರು.

[4]"ಹಸ್ತಪ್ರತಿಗಳ ಸಂಗ್ರಹಣ, ಸೂಚೀಕರಣ, ವರ್ಗೀಕರಣ ಲಿಪಿಕಾರರು ಮತ್ತು ಸೌಂದರ್ಯ ವಿನ್ಯಾಸಾದಿಗಳನ್ನು ಕುರಿತ ಲೇಖನಗಳು ಹಸ್ತಪ್ರತಿಶಾಸ್ತ್ರದ ಸ್ಪಷ್ಟವಾದ ಕಲ್ಪನೆ ಮೂಡುವುದಕ್ಕೆ ಮೊದಲೇ ಗ್ರಂಥಸಂಪಾದನಶಾಸ್ತ್ರದ ಅಂಗವಾಗಿ ಪ್ರಕಟಗೊಂಡವು. ಇಂಥ ಶಾಸ್ತ್ರದ ಬೆಳವಣಿಗೆಯ ಅವಧಿಯಲ್ಲಿ ಡಾ: ಕಲಬುರ್ಗಿಯವರು ಹಸ್ತಪ್ರತಿಶಾಸ್ತ್ರವನ್ನು ಗ್ರಂಥಸಂಪಾದನಶಾಸ್ತ್ರದಿಂದ ಬಿಡಿಸಿ ತೋರಿಸಲು ಮಾಡಿದ ಪ್ರಯತ್ನ ಪ್ರಥಮವೂ ಮಹತ್ವದ್ದು ಆಗಿದೆ."[4]

ಡಾ: ಕಲಬುರ್ಗಿಯವರು ಒಬ್ಬ ಸೃಜನಶೀಲ ಬರವಣಿಗೆಯ ಮೂಲಕ ಹೆಸರಾಗಿದ್ದು ಕನ್ನಡ ಸಾಹಿತ್ಯ ಲೋಕದಲ್ಲಿ ಹಸ್ತಪ್ರತಿಶಾಸ್ತ್ರಕ್ಕೆ ತಮ್ಮದೇ ಕೊಡುಗೆ ನೀಡಿದ್ದಾರೆ. ಹಸ್ತಪ್ರತಿಯಲ್ಲಿನ ಲೇಖನ ಸಾಮಗ್ರಿ, ತಾಳೆಗರಿ, ಕಾಗದ, ಅರಿವೆ, ಹಲಗೆ, ಚರ್ಮ ಇವುಗಳಿಗೆ ಉಪಯೊಗಿಸುವ ಲೇಖನಿ, ಮಸಿ, ಕಪ್ಪು ಬಳಪ, ಲಿಪಿ, ಲಿಪಿಕಾರರ ಬಗೆಗೆ ಆಮೂಲಾಗ್ರವಾಗಿ ಸಂಶೋಧನೆ ಮಾಡಿ ನಮಗೆ ಮಾಹಿತಿ ನೀಡಿದ್ದಾರೆ. ಹಸ್ತಪ್ರತಿಗಳ ಶೋಧದಲ್ಲಿ ಪ್ರಾಚೀನ ಹಸ್ತಪ್ರತಿ ಭಂಡಾರಗಳನ್ನು ಶೋಧಿಸಿ, ಮಠಗಳ, ಮನೆಗಳಲ್ಲಿ ಸಿಗುವ ಹಸ್ತಪ್ರತಿಗಳ ಜೊತೆಗೆ ವೈದಿಕ, ಜೈನ ಮತ್ತು ವೀರಶೈವ ಹಸ್ತಪ್ರತಿ ಭಂಡಾರಗಳನ್ನು ಶೋಧಿಸಿ ಧಾರ್ಮಿಕವಾಗಿ ಹಸ್ತಪ್ರತಿಗಳ ವಿಭಜನೆ ಮಾಡಿರುವುದು ಕಲಬುರ್ಗಿಯವರ ಶೋಧನೆಗೆ ಉತ್ತಮ ನಿದರ್ಶನವಾಗಿದೆ.

ಈವರೆಗೆ ಹಸ್ತಪ್ರತಿಯನ್ನು ಕುರಿತು, ಲೇಖನ ಗ್ರಂಥ ಮತ್ತು ಪಿ.ಹೆಚ್.ಡಿ. ಪ್ರಬಂಧಗಳು ಪ್ರಕಟವಾಗಿದ್ದರೂ ಇವುಗಳಿಗಿಂತ ಕಲಬುರ್ಗಿಯವರ ಹಸ್ತಪ್ರತಿಶಾಸ್ತ್ರ ವಿಭಿನ್ನತೆ ಪಡೆದಿದೆ. ಕಲಬುರ್ಗಿಯವರು ಹಸ್ತಪ್ರತಿಯ ಹುಟ್ಟಿನಿಂದ ಹಿಡಿದು ಅದು ಹಸ್ತಪ್ರತಿ ಭಂಡಾರದಲ್ಲಿ ವಿದ್ವಾಂಸರಿಗೆ ಉಪಯುಕ್ತವಾಗುವವರೆಗಿನ ಎಲ್ಲ ನೆಲೆಗಳ ಅಧ್ಯಯನ ಅಂದರೆ ಹಸ್ತಪ್ರತಿಗಳ ಉತ್ಪಾದನೆ, ಪ್ರಸರಣ, ಸಂಗ್ರಹಣ, ವ್ಯವಸ್ಥಾಪನ ಮತ್ತು ಪ್ರಯೋಜನಗಳನ್ನು ಮುಂದಿನ ಹಸ್ತಪ್ರತಿಗಳ ಬಗೆಗೆ ಅಧ್ಯಯನ ಮಾಡುವವರಿಗೆ ಮಾರ್ಗವನ್ನು ಹಾಕಿಕೊಟ್ಟಿದ್ದಾರೆ. ಕಲಬುರ್ಗಿಯವರು ಹಸ್ತಪ್ರತಿಶಾಸ್ತ್ರಕ್ಕೆ ನೀಡಿದ ಕೊಡುಗೆಯನ್ನು ಈ ಸಂಪ್ರಬಂಧದಲ್ಲಿ ವಿವೇಚಿಸುವ ಮೂಲಕ ಸಾವಿರಾರು ಹಸ್ತಪ್ರತಿಗಳು ನಾಡಿನ ತುಂಬ ಹಲವು ಮುಖಗಳಲ್ಲಿ ಬೆಳೆದು ನಿಂತ ಬಗೆಯನ್ನಲ್ಲದೆ, ವಿದೇಶಗಳಲ್ಲಿ ಸಂಚರಿಸಿ, ಹಸ್ತಪ್ರತಿಗಳನ್ನು ಗ್ರಂಥ ಭಂಡಾರಗಳಲ್ಲಿ ಹುಡುಕಿ, ಪ್ರಕಟಿಸಿ ನಮಗೆ ದೊರಕುವಂತೆ ಕಲ್ಪಿಸಿಕೊಟ್ಟಿದ್ದಾರೆ.

ಈ ಸಂಪ್ರಬಂಧದಲ್ಲಿ ಹಸ್ತಪ್ರತಿಗಳ ಬಗೆಗೆ ಹೇಳುವುದಾದರೆ ಹಸ್ತಪ್ರತಿಗಳಲ್ಲಿನ ಜ್ಞಾನ ಶಾಶ್ವತ, ಆದರೆ ಆ ಜ್ಞಾನವನ್ನು ಹೊತ್ತು ತಂದ ಹಸ್ತಪ್ರತಿ ಸಾಮಗ್ರಿ ಶಾಶ್ವತವಾದುದಲ್ಲ. ಅಚ್ಚಾದ ಗ್ರಂಥಗಳಲ್ಲಿ ಆಯಾ ಹಸ್ತಪ್ರತಿಗಳಲ್ಲಿನ ಕಾವ್ಯ ಅಥವಾ ಶಾಸ್ತ್ರಗಳು ಸಿಗಬಹುದೇ ಹೊರತು ಹಸ್ತಪ್ರತಿಗಳ ಇನ್ನುಳಿದ ವಿವರಗಳು ಸಿಗಲಾರವು. ಈ ದೃಷ್ಟಿಯಲ್ಲಿ 'ಕಲಬುರ್ಗಿಯವರ ಹಸ್ತಪ್ರತಿಶಾಸ್ತ್ರಕ್ಕೆ ಕೊಟ್ಟಂತಹ ಕೊಡುಗೆ' ಏನೆಂಬುದನ್ನು ತಿಳಿಯುವ ಉದ್ದೇಶದ ಮೂಲಕವಾಗಿ ಹಸ್ತಪ್ರತಿಗಳ ಬಗೆಗೆ ಒಂದು ಸಣ್ಣ ಅಧ್ಯಯನದಂತೆ ಈ ಸಂಪ್ರಂಧವನ್ನು ಮಂಡಿಸಲಾಗುತ್ತಿದೆ. ಈ ಸಂಪ್ರಂಧದ ವಿಷಯ ವ್ಯಾಪ್ತಿಯನ್ನು ಕುರಿತು ವಿವರಿಸುವ ಮೊದಲು ಈ ನಿಟ್ಟಿನಲ್ಲಿ ಪ್ರಕಟಗೊಂಡ ಲೇಖನಗಳನ್ನಷ್ಟು ನೋಡಬಹುದು. ಮೊದಲನೆಯದಾಗಿ ಎಸ್.ಎಂ. ಕತ್ರೆಯವರ 'ಭಾರತೀಯ ಗ್ರಂಥ ಸಂಪಾದನ ಪರಿಚಯ' ಎರಡನೆಯದಾಗಿ, ಡಿ.ಎಲ್.ಎನ್. ರವರ 'ಕನ್ನಡ ಗ್ರಂಥಸಂಪಾದನೆ', ಮೂರನೆಯದಾಗಿ ಡಾ: ಕಲಬುರ್ಗಿಯವರ 'ಕನ್ನಡ ಗ್ರಂಥ ಸಂಪಾದನಶಾಸ್ತ್ರ' ಹಾಗೂ ಭಾನುಮತಿಯವರ 'ಕನ್ನಡ

ಹಸ್ತಪ್ರತಿ ಮತ್ತು ಗ್ರಂಥಸಂಪಾದನೆ ಮೊದಲಾದ ಗ್ರಂಥಗಳು 'ಗ್ರಂಥಸಂಪಾದನೆ' ಕುರಿತವುಗಳಾಗಿದ್ದು, ಇವುಗಳಲ್ಲಿ ಈ ಸಂಪ್ರಂಧಕ್ಕೆ ಕೆಲವು ವಿಷಯಗಳನ್ನು ಸಂಕ್ಷೇಪವಾಗಿ ಸ್ವೀಕರಿಸಲಾಗಿದೆ.

ಅದೇ ರೀತಿಯಾಗಿ ಈ ಸಂಪ್ರಂಧಕ್ಕೆ ಅನೇಕ ವಿಷಯಗಳನ್ನು ಕನ್ನಡ ಹಸ್ತಪ್ರತಿಗೆ ಸಂಬಂಧಿಸಿದ ಕೃತಿಗಳಿಂದ ಆಯ್ದುಕೊಳ್ಳಲಾಗಿದೆ. ಕಲಬುರ್ಗಿಯವರ 'ಕನ್ನಡ ಹಸ್ತಪ್ರತಿಶಾಸ್ತ್ರದ', ಎಚ್. ದೇವಿರಪ್ಪನವರ 'ಕನ್ನಡ ಹಸ್ತಪ್ರತಿಗಳ ಇತಿಹಾಸ', ಡಾ:ಬಿ.ಕೆ. ಹಿರೇಮಠರ 'ಕನ್ನಡ ಹಸ್ತಪ್ರತಿಗಳ ಅಧ್ಯಯನ', ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ 'ಹಸ್ತಪ್ರತಿಶಾಸ್ತ್ರ', ಕಲಬುರ್ಗಿಯವರಿಗೆ ನೀಡಿದ ಅಭಿನಂದನ ಗ್ರಂಥವಾದ 'ಮಹಾಮಾರ್ಗ' ಇವುಗಳಲ್ಲದೆ ಕೆಲವು ಬಿಡಿ ಲೇಖನಗಳೂ ತೆಗೆದುಕೊಂಡು ಕಲಬುರ್ಗಿಯವರು ಹಸ್ತಪ್ರತಿಶಾಸ್ತ್ರಕ್ಕೆ ನೀಡಿದ ಕೊಡುಗೆ ಎಂಬ ವಿಷಯವನ್ನು ಸಂಗ್ರಹಿಸಿ, ಪ್ರಸ್ತುತ ಈ ಸಂಪ್ರಂಧವನ್ನು ರೂಪಿಸಲಾಗಿದೆ.

ಈ ಸಂಪ್ರಂಧದ ವಿಷಯ ವ್ಯಾಪ್ತಿಯನ್ನು ಗಮನಿಸುವುದಾದರೆ ಇದರಲ್ಲಿ ಒಟ್ಟು ಆರು **ಅಧ್ಯಯನಗಳು ಹರಡಿಕೊಂಡಿದೆ. ಪ್ರಾರಂಭದ ಅಧ್ಯಯನ**

**1. ಅಧ್ಯಯನ ಉದ್ದೇಶ ವ್ಯಾಪ್ತಿ:**

ಈ ಅಧ್ಯಯನದಲ್ಲಿ ಕಲಬುರ್ಗಿಯವರು 'ಹಸ್ತಪ್ರತಿಶಾಸ್ತ್ರಕ್ಕೆ ಕೊಟ್ಟಂತಹ ಕೊಡುಗೆ' ಅದರ ಉದ್ದೇಶ, ಸ್ವರೂಪ, ವ್ಯಾಪ್ತಿಯನ್ನು ವಿವರಿಸಲಾಗುತ್ತದೆ.

ಎರಡನೆಯ ಅಧ್ಯಾಯದಲ್ಲಿ 'ಕಲಬುರ್ಗಿಯವರ ಜೀವನ ಸಾಧನೆ'. ಕಲಬುರ್ಗಿಯವರ ಬಾಲ್ಯ, ವಿದ್ಯಾಭ್ಯಾಸ, ಅವರ ಹೆಜ್ಜೆ ಗುರುತುಗಳನ್ನು ತಿಳಸುವುದರ ಮೂಲಕ ಅವರು ಹಸ್ತಪ್ರತಿಶಾಸ್ತ್ರ ಅಧ್ಯಯನಕ್ಕಾಗಿ ಹೇಗೆ ಶ್ರಮವಹಿಸಿದರೆಂಬುದನ್ನು ಅಲ್ಲದೆ ವಿದೇಶಗಳಲ್ಲಿ ಸಿಗುವ ಹಸ್ತಪ್ರತಿಗಳ ಶೋಧನೆಗೆ ಅವರು ಪಟ್ಟ ಶ್ರಮ ಯಾವ-ಯಾವ ಗ್ರಂಥಾಲಯಗಳಲ್ಲಿ ಹಸ್ತಪ್ರತಿಗಳ ವಿಭಿನ್ನ ರೀತಿಯ ತಾಳೆಗರಿ, ಕೋರಿ ಕಾಗದ ಆಧುನಿಕ ಕಾಗದ, ಕಡಗಳನ್ನು ಶೋಧಿಸಿ, ಅವುಗಳಿಗೆ ಕೃತಿ, ಕರ್ತೃ, ಗರಿ, ನಂಬರ್‌ಗಳನ್ನು ಹಾಕಿ ಮಾಹಿತಿ ನೀಡುವ ಮೂಲಕ ಮುಂದಿನ ಹಸ್ತಪ್ರತಿಗಳ ಬಗೆಗೆ ಸಂಶೋಧನೆ ಮಾಡುವವರಿಗೆ ಮಾರ್ಗದರ್ಶಕರಾಗಿದ್ದಾರೆ ಎಂಬುದರ ಬಗೆಗೆ ಚರ್ಚಿಸಲಾಗುತ್ತದೆ. ಹಾಗೆ ಕಲಬುರ್ಗಿಯವರ ಸಂಶೋಧನೆಯನ್ನು ವಿಭಿನ್ನ ಮುಖ ಅಧ್ಯಯನದಲ್ಲಿ ಕಲಬುರ್ಗಿಯವರು ಮಾರ್ಗಗಳ ಮೂಲಕ ಅಂದರೆ ಶಾಸ್ತ್ರ, ಶಾಸನ, ಸಾಹಿತ್ಯ, ವಿಮರ್ಶೆ ಮತ್ತು ಜನಪದ ಮಾರ್ಗಗಳ ಮೂಲಕ ಅವರ ಸಂಶೋಧನೆ ಏನೆಂಬುದನ್ನು ತಿಳಿಯುವ ಮೂಲಕವಾಗಿ ಹಸ್ತಪ್ರತಿಗೆ ಹೇಗೆ ಸಂಬಂಧವೇರ್ಪಡಿಸಿದ್ದಾರೆ ಎಂಬುದನ್ನು ಈ ಅಧ್ಯಯನ ಮುಖಾಂತರ ಚರ್ಚಿಸಲಾಗುವುದು.

ಮೂರನೆ ಅಧ್ಯಯನ "ಕಲಬುರ್ಗಿಯವರ ದೃಷ್ಟಿಯಲ್ಲಿ ಗ್ರಂಥಸಂಪಾದನೆ ಮತ್ತು ಹಸ್ತಪ್ರತಿಶಾಸ್ತ್ರದ ನಿರ್ಮಾಣ" ಈ ಅಧ್ಯಯನದಲ್ಲಿ ಗ್ರಂಥಸಂಪಾದನೆ ಮತ್ತು ಹಸ್ತಪ್ರತಿಗಳಗಿರುವ ಅವಿನಾಭಾವ ಸಂಬಂಧ, ಹಸ್ತಪ್ರತಿಗಳಿಂದ ಗ್ರಂಥಗಳ ಸಂಗ್ರಹ ಕಾರ್ಯ ಹೇಗೆ ಸಾಧ್ಯ ಪರಿಷ್ಕರಣ ಕಾರ್ಯ ವಿಧಾನಗಳನ್ನು ಚರ್ಚೆಗೆ ಒಳಪಡಿಸಲಾಗುತ್ತದೆ. ಕಲಬುರ್ಗಿಯವರು ಹಸ್ತಪ್ರತಿಗಳಿಂದ ಗ್ರಂಥಗಳ ಸಂಗ್ರಹ, ಪರಿಷ್ಕರಣ ಕಾರ್ಯ ವಿಧಾನಗಳಿಗೆ 5 ಹಂತಗಳನ್ನು ತೋರಿಸಿಕೊಟ್ಟ ಹಾದಿ, ಹಸ್ತಪ್ರತಿಗಳ ಪೀಳಿಗೆ, ಗ್ರಂಥಸಂಪಾದನೆಯಲ್ಲಿ ತಲೆದೋರುವ ಭಿನ್ನಪಾಠಗಳು ಮುಂತಾದವನ್ನು ಚರ್ಚಿಸುವುದರೊಂದಿಗೆ ಕಲಬುರ್ಗಿಯವರ ಗ್ರಂಥಸಂಪಾದನ ಕೃತಿಗಳನ್ನು ಚರ್ಚೆಗೆ ತೆಗೆದುಕೊಳ್ಳಲಾಗುತ್ತದೆ.

ಅಧ್ಯಾಯ ನಾಲ್ಕರಲ್ಲಿ 'ಕಲಬುರ್ಗಿಯವರ ಹಸ್ತಪ್ರತಿಶಾಸ್ತ್ರ ಕೃತಿಯ ಸ್ವರೂಪದ ಬಗೆಗೆ ಚರ್ಚಿಸಲಾಗುತ್ತದೆ. ಈ ಅಧ್ಯಾಯದಲ್ಲಿ ಹಸ್ತಪ್ರತಿ ವ್ಯಾಖ್ಯೆಯನ್ನು ಕೊಟ್ಟು, ಕನ್ನಡ ಹಸ್ತಪ್ರತಿ, ಕನ್ನಡ ಹಸ್ತಪ್ರತಿ ಸಂಪತ್ತಿನ ಬಗೆಗೆ, ಹಸ್ತಪ್ರತಿಶಾಸ್ತ್ರದ ವ್ಯಾಪ್ತಿಯಲ್ಲಿ ಕಂಡುಬರುವ ಉತ್ಪಾದನ, ಪ್ರಸರಣ, ಸಂಗ್ರಹಣ, ವ್ಯವಸ್ಥಾಪನ ಮತ್ತು ಪ್ರಯೋಜನಗಳ ಬಗೆಗೆ ಕ್ರಮಬದ್ಧವಾಗಿ ಚರ್ಚಿಸಲಾಗುತ್ತದೆ. ಲೇಖನ ಸಾಮಗ್ರಿಗಳು, ಲಿಪಿಕಾರರು ಹಸ್ತಪ್ರತಿಗಳ ಶೋಧ, ಸಂಗ್ರಹಕ್ಕೆ ಕಲಬುರ್ಗಿಯವರು ಕ್ಷೇತ್ರಕಾರ್ಯದ ಅವಶ್ಯಕತೆ ಎಷ್ಟು ಎಂಬುದೆಂದು ತಿಳಿಸಿರುವ ಬಗೆಗೆ ಚರ್ಚಿಸಲಾಗುತ್ತದೆ. ಕಲಬುರ್ಗಿಯವರ ಹಸ್ತಪ್ರತಿಶಾಸ್ತ್ರ ಕೃತಿಯ ಸ್ವರೂಪದಲ್ಲಿ ಹಸ್ತಪ್ರತಿ ಸೂಚಿಗಳ ಬಗೆಗೆ ತಿಳಿಸುತ್ತ, ಆಧುನಿಕ ಕಾಲದಲ್ಲಿ ಸೂಚಿ ರಚಿಸುವ ಕ್ರಿಯೆ ಭಾರತದಲ್ಲಿ ಹೇಗೆ ಪ್ರಾರಂಭವಾಯಿತು, ಕಲಬುರ್ಗಿಯವರು ನೀಡುವ ಸೂಚಿಗಳ ವರ್ಗೀಕರಣ ಬಗೆಗೆ ಈ ಅಧ್ಯಯನದಲ್ಲಿ ಚರ್ಚಿಸಲಾಗುತ್ತದೆ.

ಅಧ್ಯಾಯ ಐದರಲ್ಲಿ 'ಹಸ್ತಪ್ರತಿಶಾಸ್ತ್ರದ ಅಧ್ಯಯನದ ಸಾಧ್ಯತೆಗಳು' ಎಂಬುದರಲ್ಲಿ ಕಲಬುರ್ಗಿಯವರು ಈ ಅಧ್ಯಯನಕ್ಕೆ ಸಂಬಂಧಿಸಿದಂತೆ ಇಂದು ಮುಂದು ಈ ಹಸ್ತಪ್ರತಿಶಾಸ್ತ್ರದ ಅಧ್ಯಯನ ಯಾವ ರೀತಿ ಸಾಧ್ಯತೆಗಳನ್ನು ಪಡೆದಿದೆ ಎಂಬುದನ್ನು ನೀಡಿರುವ ಮಾಹಿತಿಯ ಆಧಾರದ ಮೇಲೆ ಹಾಗೂ ಇತರ ಲೇಖಕರು ನೀಡಿರುವ ಮಾಹಿತಿಗಳನ್ನು ಸಮೀಕ್ಷಿಸಿ ಚರ್ಚಿಸಲಾಗುವುದು. ಅನೇಕ ವಿದ್ವಾಂಸರುಗಳು ರಚಿಸಿದ ಗ್ರಂಥಗಳನ್ನು ಅಧ್ಯಯನ ಮಾಡುವ ಮೂಲಕ ಯಾವ ರೀತಿ ಹಸ್ತಪ್ರತಿ ಶಾಸ್ತ್ರದ ಅಧ್ಯಯನ ಸಾಧ್ಯವಾಗುತ್ತದೆ ಎಂಬ ವಿಷಯವನ್ನು ಇಲ್ಲಿ ಮುಖ್ಯವಾಗಿ ಚರ್ಚೆಗೆ ಒಳಪಡುತ್ತದೆ.

ಅಧ್ಯಾಯ ಆರು ಇದು ಸಮಾರೋಪವನ್ನು ಒಳಗೊಂಡಿದೆ. [5] "ಕನ್ನಡ ಹಸ್ತಪ್ರತಿ ಸಂಪತ್ತನ್ನು ಕಣ್ಣೆದುರಿಗೆ ತಂದುಕೊಂಡಾಗ ಮೇಲ್ನೋಟಕ್ಕೆ ಗೋಚರಿಸುವ ಒಂದೆರಡು ಹೊಸ ಅಧ್ಯಯನ ಕ್ಷೇತ್ರಗಳ ನಿದರ್ಶನಗಳನ್ನು ತೋರಿಸಿಕೊಟ್ಟು "ಹಸ್ತಪ್ರತಿ ಶಾಸ್ತ್ರಕ್ಕೆ ಒಳಪಡುವ ಇಂಥ

ಅಧ್ಯಯನ ಬಹುಮಟ್ಟಿಗೆ ಕನ್ನೆ ನೆಲ'' ಇನ್ನು "ಸಂಶೋಧಕರಿಗೆ ಅವಕಾಶಗಳು ಸಮೃದ್ಧವಾಗಿದೆ"[5] ಎಂಬುದನ್ನು ಮುಂದಿನ ಹಸ್ತಪ್ರತಿ ಶಾಸ್ತ್ರದ ಬಗೆಗೆ ಅಧ್ಯಯನ ಮಾಡುವವರಿಗೆ ಕಲಬುರ್ಗಿಯವರು ಹಸ್ತಪ್ರತಿಶಾಸ್ತ್ರಕ್ಕೆ ನೀಡಿದ ಕೊಡುಗೆಯು ಒಂದು ತಳಪಾಯದಂತಿದೆ. ಅವರು ಹಕಿಕೊಟ್ಟಂತಹ ಮಾರ್ಗದರ್ಶನದಲ್ಲಿ ಸಂಶೋಧಕನಾದವನು ನಡೆದದ್ದೇ ಆದರೆ ತನ್ನ ಗುರಿ ತಲಪುತ್ತಾನೆ ಎಂಬ ಸೂಚನೆಯೊಂದಿಗೆ ಸಮಾರೋಪಣ ಮುಕ್ತಾಯವಾಗುತ್ತದೆ.

ಕಲಬುರ್ಗಿಯವರ ಬಗೆಗೆ ಅನೇಕ ಅಭಿನಂದನಾ ಗ್ರಂಥಗಳು ಪ್ರಕಟವಾಗಿದ್ದು ಅವುಗಳ ಸಹಯದಿಂದ ಕಲಬುರ್ಗಿಯವರು ಹಸ್ತಪ್ರತಿಶಾಸ್ತ್ರಕ್ಕೆ ನೀಡಿದ ಕೊಡುಗೆ ಎಂಬ ವಿಚಾರವನ್ನು ಈ ಸಂಪ್ರಬಂಧದಲ್ಲಿ ಚರ್ಚಿಸಲಾಗುತ್ತಿದೆ. ಹಸ್ತಪ್ರತಿ ಮತ್ತು ಗ್ರಂಥಸಂಪಾದನೆ ಒಂದೇ ನಾಣ್ಯದ ಎರಡು ಮುಖಗಳು. ಇಲ್ಲಿ ಈ ವಿಷಯವಾಗಿ ಚರ್ಚಿಸುವಾಗ ಈ ಸಂಪ್ರಬಂಧದ ವ್ಯಾಪ್ತಿಯಲ್ಲಿ ಒಳಪಡುವ ವಿಷಯವನ್ನು ಅನೇಕ ವಿದ್ವಾಂಸರುಗಳು ಈಗಾಗಲೇ ಚರ್ಚಿಸಿದ್ದು, ಅಲ್ಲಿ ಮತ್ತೆ ಹೊಸದೇನನ್ನೂ ಹೇಳುವ ಸಾಧ್ಯತೆ ಇಲ್ಲದಂತಿದ್ದರೆ ಅದನ್ನೇ ಸಮರ್ಥಿಸಿ ಹೇಳಿರುತ್ತೇನೆ. ಅವುಗಳನ್ನು ಸಂಖ್ಯೆಗಳನ್ನು ನೀಡಿ, ಅಡಿಟಿಪ್ಪಣಿಯಲ್ಲಿ ಸೂಚಿಸುತ್ತ ಮುಂದೆ ಸಾಗಿರುತ್ತೇನೆ.

"ಕಲಬುರ್ಗಿಯವರು ಹಸ್ತಪ್ರತಿ ಶಾಸ್ತ್ರಕ್ಕೆ ನೀಡಿದ ಕೊಡುಗೆ" ಈ ಸಂಪ್ರಂಧದಲ್ಲಿ ವಿಷಯಗಳ ಚರ್ಚೆ ಸಮಗ್ರ ವ್ಯಾಪ್ತಿಗೆ ಒಳಪಡುತ್ತದೆ. ಆದರೆ, ಅಧ್ಯಯನದ ಮಿತಿಯಿಂದ ಈ ಸಂಪ್ರಂಬಂಧವನ್ನು ಸಂಕ್ಷೇಪವಾಗಿ ಚರ್ಚಿಸಲಾಗುತ್ತಿದೆ. ಸಂಪ್ರಂಬಂಧಕ್ಕೆ ಒಂದು ಉದ್ದೇಶವನ್ನು ಕಲ್ಪಿಸಿಕೊಂಡು, ನಿರ್ದಿಷ್ಟ ವ್ಯಾಪ್ತಿಯಲ್ಲಿ ಇದನ್ನು ರೂಪಿಸಲಾಗಿದೆ.

## ಅಡಿಟಿಪ್ಪಣಿಗಳು:

1. ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ
   ಡಾ: ಬಿ.ಕೆ. ಹೀರೆಮಠ
   ಪುಟ -2
2. ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ
   ಡಾ: ಬಿ.ಕೆ. ಹೀರೆಮಠ
   ಪುಟ-9
3. ಕನ್ನಡ ಹಸ್ತಪ್ರತಿಶಾಸ್ತ್ರ
   ಡಾ: ಎಂ.ಎಂ. ಕಲಬುರ್ಗಿ
   'ಅರಿಕೆ'

4. ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ

ಡಾ: ಬಿ.ಕೆ. ಹೀರೆಮಠ

ಪುಟ-3

5. ಕನ್ನಡ ಹಸ್ತಪ್ರತಿಗಳುಒಂದು ಅಧ್ಯಯನ

ಡಾ: ಬಿ.ಕೆ. ಹೀರೆಮಠ

ಪುಟ-5

# ಅಧ್ಯಾಯ - 2

# ಕಲಬುರ್ಗಿಯವರ ಜೀವನ ಸಾಧನೆ

[1]"ಕನ್ನಡ ಸಂಶೋಧಕರಲ್ಲಿ ಅದ್ವಿತೀಯರೆನಿಸಿರುವ ಬಹುಮುಖ ಪ್ರತಿಭೆ ಮತ್ತು ಪಾಂಡಿತ್ಯಗಳ ಡಾ: ಎಂ.ಎಂ. ಕಲಬುರ್ಗಿ ಅವರು ಶಾಸನ, ಜನಪದ, ಗ್ರಂಥಸಂಪಾದನೆ, ಛಂದಸ್ಸು, ವ್ಯಾಕರಣ, ನಾಮವಿಜ್ಞಾನ ಹೀಗೆ ಏನೆಲ್ಲ ಕ್ಷೇತ್ರಗಳಲ್ಲಿ ತಲಸ್ಪರ್ಶಿಯಾಗಿ ಹರಿಯುವ ಅವರ ವಿದ್ವತ್ತು, ಸಾಹಿತ್ಯ ಮಾರ್ಗದಲ್ಲಿ ಗುರುತರವಾದುದನ್ನು ಕೊಟ್ಟಿದೆ."[1]

ಡಾ: ಎಂ.ಎಂ. ಕಲಬುರ್ಗಿಯವರು ತಮ್ಮ "ಹಸ್ತಪ್ರತಿಶಾಸ್ತ್ರ; ಅದರ ವಿವಿಧ ಮುಖಗಳು", ಮತ್ತು ಹಸ್ತಪ್ರತಿ ಕ್ಷೇತ್ರಕಾರ್ಯ; ವಿಧಾನ ಸಾಧನೆ" ಎಂಬ ಎರಡು ಲೇಖನಗಳನ್ನು ಸಾದರಪಡಿಸಿ ಹಸ್ತಪ್ರತಿಯನ್ನು ಶಾಸ್ತ್ರ ಮುಖೇನ ಅಧ್ಯಯನಕ್ಕೆ ಒಳಪಡಿಸಿ, ಹಸ್ತಪ್ರತಿಗಳ ಅಧ್ಯಯನ ಆರಂಭಿಸಿ ಯಾವ ರೀತಿ ಹಸ್ತಪ್ರತಿಶಾಸ್ತಕ್ಕೆ ಕೊಡುಗೆ ನೀಡಿದ್ದಾರೆ. ಅವರ ಜೀವನ ಸಾಧನೆಯನ್ನು ಇಲ್ಲಿ ವಿವೇಚಿಸಲಾಗುವುದು.

1. **ಕಲಬುರ್ಗಿಯವರ ಜೀವನ ಮತ್ತು ಬಾಲ್ಯ:**

1938 ನವೆಂಬರ್ 28 ರಂದು ವಿಜಾಪುರ ಜಿಲ್ಲೆಯ ಸಿಂದಗಿ ತಾಲ್ಲೂಕಿನ ಗುಬ್ಬೇವಾಡ ಗ್ರಾಮದಲ್ಲಿ ಜನಿಸಿದರು. ತಂದೆ ಮಡಿವಾಳಪ್ಪ, ತಾಯಿ ಗೌರಮ್ಮ.

2. **ಶಿಕ್ಷಣ:** ಕಲಬುರ್ಗಿಯವರ ಪ್ರಾಥಮಿಕ ಶಿಕ್ಷಣ ವಿಜಾಪುರ ಜಿಲ್ಲೆಯ ಸಿಂಧಗಿ ತಾಲ್ಲೂಕಿನ ಯರಗಲ್ಲ ಗ್ರಾಮದಲ್ಲಿ ನಡೆಯಿತು. 1960 ರಲ್ಲಿ ಬಿ.ಎ. ಪದವಿಯನ್ನು ಪ್ರಥಮ ಸ್ಥಾನದಲ್ಲಿ ಉತ್ತೀರ್ಣರಾಗಿ 1962 ರಲ್ಲಿ ಧಾರವಾಡದಲ್ಲಿ ಎಂ.ಎ. ಸ್ನಾತಕೋತ್ತರ ಪದವಿಯನ್ನು ಬಂಗಾರ ಪದಕದೊಂದಿಗೆ ಪ್ರಥಮ ಸ್ಥಾನದಲ್ಲಿ ಉತ್ತೀರ್ಣರಾದರು. [2]"ಒಮ್ಮೆ ತಮ್ಮೂರಿನಲ್ಲಿ ಇದ್ದಂತಹ ದೇವಸ್ಥಾನದಲ್ಲಿದ್ದ ಶಿಲಾಶಾಸನದ ಮೇಲೆ ಕುತೂಹಲದಿಂದ ಕಣ್ಣಾಡಿಸುವಾಗ ತಮಗೆ ತಿಳಿದಿದ್ದ ಶಾಂತಲಾ ಕಾದಂಬರಿಯಲ್ಲಿ ಬರುವ ಶ್ಲೋಕದ ಸಾಲುಗಳು ಅಲ್ಲಿ ಕಂಡವು. ಆಗ ಗ್ರಾಮಸ್ಥರು ತೋರಿದ ಮೆಚ್ಚುಗೆ, ಸಿಕ್ಕ ಹೊಗಳಿಗೆ ತಮ್ಮನ್ನು ಶಾಸನ ಮತ್ತು ಸಂಶೋಧನೆಯತ್ತ ಸೆಳೆಯಿತು"[2] ಎಂದು ಅವರೆ ತಿಳಿಸಿದ್ದಾರೆ. 1962 ರಲ್ಲಿ ಕನ್ನಡ ಅಧ್ಯಯನ ಪೀಠದ "ಸಮಗ್ರ ವಚನ ವಾಙ್ಮಯ ಸಂಶೋಧನೆ ಸಂಸ್ಕರಣ ಪ್ರಕಟನೆ ಯೋಜನೆಯ ಸಹಾಯಕ ಸಂಪಾದಕರಾದರು.

1968 ರಲ್ಲಿ ತಮ್ಮ ಪಿ.ಹೆಚ್.ಡಿ. ಪ್ರಬಂಧವಾದ "ಕವಿರಾಜ ಮಾರ್ಗ ಪರಿಸರದ ಕನ್ನಡ ಸಾಹಿತ್ಯ" ಕ್ಕೆ ಡಾಕ್ಟರೇಟ್ ಪದವಿ ಲಭಿಸಿತು.

3. **ಉದ್ಯೋಗ – ಹೆಜ್ಜೆ ಗುರುತುಗಳು:**

1966–71 ರಲ್ಲಿ ಕನ್ನಡ ಅಧ್ಯಯನ ಪೀಠದಲ್ಲಿ ಅಧ್ಯಾಪಕ ಹಾಗೂ ಕನ್ನಡ ಸಂಘದ ಕಾರ್ಯಾಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದರು. 1971-72 ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ವಿದ್ಯಾರ್ಥಿ ಕೂಟದ ಸಾಂಸ್ಕೃತಿಕ ವಿಭಾಗದ ಉಪಾಧ್ಯಕ್ಷರಾಗಿ 1977–82 ರಲ್ಲಿ ವಿಶ್ವವಿದ್ಯಾಲಯದ ಧನ ಸಹಾಯ ಆಯೋಗದ ರಾಷ್ಟ್ರೀಯ ಉಪನ್ಯಾಸಕರಾಗಿ ನೇಮಕಗೊಂಡರು. 1982 ರಲ್ಲಿ ಪ್ರಾಚೀನ ಕನ್ನಡ ಹಸ್ತಪ್ರತಿಗಳ ದಾಖಲೆಗಳ ಶೋಧಕ್ಕಾಗಿ ಇಂಗ್ಲೆಂಡ್, ಆಕ್ಸ್‌ಫರ್ಡ್, ಕೇಂಬ್ರಜ್‌ಗಳಗೆ ಭೇಟಿ. 1980–88 ರಲ್ಲಿ ಹಾಗೂ 1983–85 ರಲ್ಲಿ "ಶ್ರೀ ಬಸವೇಶ್ವರ ಪೀಠದ' ಹಾಗೂ 'ಕನ್ನಡ ಅಧ್ಯಯನ ಪೀಠದ' ಮುಖ್ಯಸ್ಥರಾಗಿ ಸೇವೆ ಸಲ್ಲಿಸಿದ್ದಾರೆ. 1984 ರಲ್ಲಿ ಕನ್ನಡ ಸಂಶೋಧನ ಸಂಸ್ಥೆಯ ಕಾರ್ಯನಿರ್ವಾಹಕ ನಿರ್ದೇಶಕರಾಗಿ ಹಾಗೂ 1982–86 ರಲ್ಲಿ 'ಕರ್ನಾಟಕ ವಿಶ್ವವಿದ್ಯಾಲಯದ ಸಿಂಡಿಕೇಟ್' ಸದಸ್ಯರಾಗಿ ಆಯ್ಕೆಗೊಂಡು ತಮ್ಮದೆ ಆದ ಚಿರಸ್ಮರಣೀಯ ಸೇವೆ ಮಾಡಿ ಮನೆಮಾತಾದರು. 1981 ರಲ್ಲಿ "ಗೋಕಾಕ್ ಚಳುವಳ ಮತ್ತು ಅಖಿಲ ಕರ್ನಾಟಕ ಕೇಂದ್ರ ಕ್ರಿಯಾ ಸಮಿತಿಯ ಕಾರ್ಯದರ್ಶಿ' ಯಾಗಿದ್ದಲ್ಲದೆ 1975 ರಲ್ಲಿ ಗದುಗಿನ ತೋಂಟಧಾರ್ಯ ಮಠದ ಆಶ್ರಯದಲ್ಲಿ 'ವೀರಶೈವ ಅಧ್ಯಯನ ಸಂಸ್ಥೆ' ಅಸ್ತಿತ್ವಕ್ಕೆ ತಂದರು. 1991 ರಲ್ಲಿ ಶಿವಮೊಗ್ಗ ಆನಂದಪುರ ಮಠದಲ್ಲಿ 'ಮಲೆನಾಡು ವೀರಶೈವ ಅಧ್ಯಯನ ಸಂಸ್ಥೆಯನ್ನು' ಸ್ಥಾಪನೆ ಮಾಡಿದರು. 1993 ರಲ್ಲಿ ನಿಡಸೂಸಿಯ ಶಿವಲಿಂಗೇಶ್ವರ ಮಠದಲ್ಲಿ 'ಶರಣ ಸಂಸ್ಕೃತಿ ಅಕಾಡೆಮಿ' ಸ್ಥಾಪಿಸಿದರು. 1996 ರಲ್ಲಿ ಮೈಸೂರಿನ ಶ್ರೀ ಸಾತನೂರು ಮಠದಲ್ಲಿ 'ಸಮಗ್ರ ಸ್ವರವಚನ ಸಾಹಿತ್ಯ ಪ್ರಕಟನಮಾಲೆ' ಆರಂಭಿಸಿದರು. 1997 ರಲ್ಲಿ ಅಖಿಲ ಭಾರತ ನಾಮ ವಿಜ್ಞಾನ ಸಮ್ಮೇಳನದ ಅಧ್ಯಕ್ಷರಾಗಿದ್ದರು. 1998 ರಲ್ಲಿ ಹಂಪಿ ಕನ್ನಡ ವಿಶ್ವವಿದ್ಯಾಲಯದ ಕುಲಪತಿಗಳಾಗಿ ಆಯ್ಕೆಗೊಂಡಿದ್ದಲ್ಲದೆ, ತಮ್ಮ ಸಂಶೋಧನೆಯಿಂದ ಹಸ್ತಪ್ರತಿಗಳ ಅಧ್ಯಯನಕ್ಕೆ ಉತ್ತಮೋತ್ತಮ ಕೊಡುಗೆ ನೀಡಿದ್ದಾರೆ ಎಂಬುದನ್ನು ಸರ್ವಕಾಲಕ್ಕೂ ಮರೆಯುವಂತಿಲ್ಲ.

4. **ಕಲಬುರ್ಗಿಯವರಿಗೆ ದೊರೆತ ಪ್ರಶಸ್ತಿಗಳು:**

1970 – ಶಾಸನಗಳಲ್ಲಿ ಶಿವಶರಣರು

1974 – ಶಾಸನ ವ್ಯಾಸಂಗ

1980 – ಸಮಾಧಿ, ಬಲಿದಾನ, ವೀರಮರಣ ಸ್ಮಾರಕಗಳು

1990 – ಚೆನ್ನಬಸವಣ್ಣನವರ ಷಟಸ್ಥಲ ವಚನ ಮಹಾಸಂಪುಟ

1989 – ಮಾರ್ಗ ಸಂಪುಟ – 2

1993 – ಹಸ್ತಪ್ರತಿಶಾಸ್ತ್ರ

ಈ ಮೇಲಿನ ಕೃತಿಗಳಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪುರಸ್ಕಾರ ದೊರೆಯಿತು.

1990 – ದೇ. ಜವರೇಗೌಡ ಟ್ರಸ್ಟಿನ ವಿಶ್ವಮಾನವ ಪ್ರಶಸ್ತಿ ಮಾರ್ಗ ಸಂಪುಟಕ್ಕೆ ದೊರೆಯಿತು.

1991 – ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ

1994 – ವರ್ಧಮಾನ ಸಾಹಿತ್ಯ ಪ್ರಶಸ್ತಿ

1996 – ಪಂಪ ಪ್ರಶಸ್ತಿ

1997 – ಇಳಕಲ್ಲ ಚಿತ್ತರಗಿ ಮಠದ ಪ್ರಶಸ್ತಿ

ಸಾಹಿತ್ಯ ಕೃಷಿಗೆ ಸಂಬಂಧಿಸಿದಂತೆ ಎಂ.ಆರ್. ಕೃಷ್ಣಶಾಸ್ತ್ರಿಗಳ ಕುರಿತಾಗಿ ಒಂದು ಮಾತಿದೆ. [3]"ಕನ್ನಡದ ಹೊಲದಲ್ಲಿ ಕೃಷಿ ಮಾಡಿ ತೆಗೆದ ಬೆಳೆಯಲ್ಲಿ ತಮಗಾಗಿ ತೆಗೆದದ್ದು ಒಂದು ಪಾಲಾದರೆ ಇತರರಿಗೆ ತೆಗೆದದ್ದು ಮೂರು ಪಾಲು."[3] ಈ ಮಾತು ಸಂಶೋಧಕ ಎಂ.ಎಂ. ಕಲಬುರ್ಗಿಯವರಿಗೆ ಚೆನ್ನಾಗಿ ಅನ್ವಯವಾಗುತ್ತದೆ.

ಕಲಬುರ್ಗಿಯವರ ಪಿ.ಎಚ್‌ಡಿ. ಮಹಾಪ್ರಬಂಧ "ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ" ಈಗಲೂ ಒಂದು ಮಾದರಿ ಮಹಾಪ್ರಬಂಧವೆನಿಸಿದೆ. ಇದು ಅಧ್ಯಯನ ದೃಷ್ಟಿಯಿಂದಲೂ ವಸ್ತು ವಿಶ್ಲೇಷಣೆಯ ದೃಷ್ಟಿಯಿಂದಲೂ ಈ ಕೃತಿ ಮಹತ್ವದ್ದು.

**ಆ) ಹಸ್ತಪ್ರತಿಗಳ ಶೋಧಕ್ಕಾಗಿ ಎಂ.ಎಂ. ಕಲಬುರ್ಗಿಯವರು ವಿದೇಶಿ ಸಂಸ್ಥೆಗಳ ಸಂದರ್ಶನ:**

ಕಲಬುರ್ಗಿಯವರು ಹಸ್ತಪ್ರತಿಗಳ ಸಂಶೋಧನೆಯಲ್ಲಿ ಅನ್ವೇಷಣೆಯಲ್ಲಿ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡರು. ಎಂ.ಎಂ. ಕಲಬುರ್ಗಿಯವರ ಹಸ್ತಪ್ರತಿಗಳ ಅನ್ವೇಷಣಾ ಆಸಕ್ತಿಯ ಫಲವಾಗಿ [4]"ವಿಶ್ವವಿದ್ಯಾಲಯ ಧನಸಹಾಯ ಆಯೋಗದ ನೆರವಿನಿಂದ 1982 ರ ಅಕ್ಟೋಬರ 14 ರಿಂದ ನವೆಂಬರ್ 26ರ ವರೆಗೆ 6 ವಾರಗಳ ಕಾಲ ಕನ್ನಡ ಹಸ್ತಪ್ರತಿಗಳ ಅನ್ವೇಷಣೆ ಅಧ್ಯಯನಕ್ಕೋಸ್ಕರ ಕಲಬುರ್ಗಿಯವರಿಗೆ ಇಂಗ್ಲೆಂಡ್‌ಗೆ ಹೋಗುವ ಅವಕಾಶ ದೊರೆಯಿತು. ಆನಂತರ ಎಂ.ಎಂ. ಕಲಬುರ್ಗಿಯವರು ಲಂಡನ್, ಆಕ್ಸ್‌ಫರ್ಡ್ ಮತ್ತು ಕೇಂಬ್ರಿಜ್‌ಗಳಲ್ಲಿ ಕನ್ನಡ ಹಸ್ತಪ್ರತಿಗಳನ್ನು ಶೋಧಿಸಿದರು."[4] ಲಂಡನ್‌ನಲ್ಲಿ ಅನೇಕ ಲೈಬ್ರರಿಗಳನ್ನು ಸಂದರ್ಶಿಸಿ, ಅಲ್ಲಿ ದೊರೆತ ಹಸ್ತಪ್ರತಿಗಳ ಪಟ್ಟಿಯನ್ನು ನೀಡಿದ್ದಾರೆ. ಈ ಮೂಲಕವಾಗಿ ಹಸ್ತಪ್ರತಿ ವಿದ್ಯಾರ್ಥಿಗಳಿಗೆ ಇವರ ಸಾಧನೆ, ಆಸಕ್ತಿ, ಏಕಾಗ್ರತೆ ದಾರಿದೀಪವಾಗಿದೆ.

ಎಂ.ಎಂ. ಕಲಬುರ್ಗಿಯವರು ಹಸ್ತಪ್ರತಿಗಳ ಶೋಧನೆಯನ್ನು ಇಂಗ್ಲೆಂಡ್‌ನಲ್ಲಿ ಈ ಕೆಳಗಿನ ಏಳು ಸಂಸ್ಥೆಗಳನ್ನು ಸಂದರ್ಶಿಸಿ, ತಾಳೆಗರಿ, ಕೋರಿ ಕಾಗದ,ಕಡತ, ಆಧುನಿಕ ಕಾಗದಗಳ ಮೇಲೆ ಬರೆದ ಹಸ್ತಪ್ರತಿಗಳನ್ನು ಶೋಧಿಸಿ ಸಾಧನೆಗೈದಿರುವ ವಿಷಯ ಕಷ್ಟಸಾಧ್ಯವೆಂದೇ

ಹೇಳಬೇಕಾಗುತ್ತದೆ. ಎಂ.ಎಂ. ಕಲಬುರ್ಗಿಯವರು ಹಸ್ತಪ್ರತಿಗಳಾಗಿ ಶೋಧಿಸಿದ ಸಂಸ್ಥೆಗಳು ಈ ಕೆಳಕಂಡಂತಿವೆ.

1. [5]"ಇಂಡಿಯಾ ಆಫೀಸ್ ಓರಿಯಂಟಲ್
2. ಬ್ರಿಟಿಷ್ ಲೈಬ್ರರಿ
3. ಬ್ರಿಟಿಷ್ ಮ್ಯೂಬಿಯಂ
4. ಸ್ಕೂಲ್ ಆಫ್ ಓರಿಯಂಟಲ್ ಆ್ಯಂಡ್ ಆಫ್ರಿಕನ್ ಸ್ಟಡೀಸ್
5. ವೆಲ್‌ಕಮ್ ಇನ್‌ಸ್ಟಿಟ್ಯೂಟ್ ಆಫ್ ಹಿಸ್ಟರಿ ಆಫ್ ಮೆಡಿಶನ್
6. ರಾಯಲ್ ಏಶಿಯಾಟಿಕ್ ಸೊಸೈಟಿ
7. ಬೈಬಲ್ ಸೊಸೈಟಿ"[5]

1. **ಇಂಡಿಯಾ ಆಫೀಸ್ ಓರಿಯಂಟಲ್:**

ಲಂಡನ್ ದ ವಾಟರ್‌ಲೂ ಟ್ಯೂಬ್ ಸ್ಟೇಶನ್ ಸಮೀಪದಲ್ಲಿ ಬ್ಲಾಕ್ ಪ್ರೇಯರ್ ಮಾರ್ಗದ ಮೇಲೆ ಈ ಗ್ರಂಥಾಲಯವಿದೆ. ಈ ಗ್ರಂಥಾಲಯಕ್ಕೆ ಭೇಟಿ ನೀಡಿದ ಎಂ.ಎಂ. ಕಲಬುರ್ಗಿಯವರು ಭಾರತೀಯ ಎಲ್ಲ ಪ್ರಾಂತಗಳಿಗೆ ಸಂಬಂಧಿಸಿದ ಪ್ರಾಚೀನ ಗ್ರಂಥ, ದಾಖಲೆಗಳನ್ನು ಒಳಗೊಂಡ ಅಪೂರ್ವ ಭಂಡಾರವೆಂದು ತಿಳಿಸುತ್ತಾರೆ. ಈ ಗ್ರಂಥಾಲಯದಲ್ಲಿ ಕನ್ನಡ ಭಾಷ ಸಂಪತ್ತನ್ನು

1. ಮುದ್ರಿತ ಗ್ರಂಥಗಳು
2. ಹಸ್ತಪ್ರತಿಗಳು
3. ದಾಖಲೆಗಳು – ಎಂದು ವರ್ಗೀಕರಿಸಿರುವುದು ಗಮನಾರ್ಹ.

ಕಲಬುರ್ಗಿಯವರು ಈ ಗ್ರಂಥಾಲಯದಲ್ಲಿ ಹಸ್ತಪ್ರತಿಗಳು ಅಸ್ತವ್ಯಸ್ತ ವಾಗಿರುವುದರ ಬಗೆಗೆ ಮಾಹಿತಿ ನೀಡಿದ್ದಾರೆ. ಇಲ್ಲಿನ ಹಲವಾರು ಹಸ್ತಪ್ರತಿಗಳು ಸಂಸ್ಕೃತ ಕೃತಿಗಳಾಗಿರುವ ಕನ್ನಡ ಟೀಕಾ ಗ್ರಂಥಗಳು ಸಂಸ್ಕೃತ ವಿಭಾಗದಲ್ಲೂ, ಲಿಪಿಸಾಮ್ಯ ಕಾರಣವಾಗಿ ಕೆಲವು ಕನ್ನಡ ಗ್ರಂಥಗಳು ತೆಲುಗು ವಿಭಾಗದಲ್ಲೂ, ಕನ್ನಡ ಲಿಪಿಯಲ್ಲಿ ಬರೆದ ಸಂಸ್ಕೃತ ಗ್ರಂಥಗಳು ಕನ್ನಡ ವಿಭಾಗದಲ್ಲೂ ಸೇರಿ ಬಿಟ್ಟಿರುವುದನ್ನು ಗುರ್ತಿಸಿದ ಡಾ:ಕಲಬುರ್ಗಿಯವರು ಇಂಡಿಯಾ ಆಫೀಸ್ ಲೈಬ್ರರಿಯಲ್ಲಿ ಸುಮಾರು 41 ಹಸ್ತಪ್ರತಿಗಳನ್ನು ಶೋಧಿಸಿ ಕೃತಿ, ಕರ್ತೃ, ಆಕಾರ, ಗರಿ ಸಮೇತವಾಗಿ ಹಸ್ತಪ್ರತಿಗಳ ಬಗೆಗೆ ಮಾಹಿತಿ ನೀಡಿ ಮುಂದಿನ ಅನ್ವೇಷಣಗಾರರಿಗೆ ಮಾರ್ಗದರ್ಶಿಯಾಗಿದ್ದಾರೆ.

ಎಂ.ಎಂ. ಕಲಬುರ್ಗಿಯವರು "ಇಂಡಿಯಾ ಆಫೀಸ್ ಓರಿಯಂಟಲ್" ಗ್ರಂಥಾಲಯದಲ್ಲಿ ಅನ್ವೇಷಣೆ ಮಾಡಿದ 41 ಹಸ್ತಪ್ರತಿಗಳಲ್ಲಿ ಕೆಲವನ್ನು ಉದಾಹರಣೆಯಾಗಿ ಗಮನಿಸಬಹುದು.

1. ತಾಳೆಗರಿ ಹಸ್ತಪ್ರತಿಗಳು (ಕಾರ್ಯ–ಪುರಾಣ):

1) ಬಸವ ಪುರಾಣ - ಭೀಮಕವಿ

MSS, Kan. PL-5; ಆಕಾರ : 17"x2"; ಗರಿ : 1-175; ಭಾಮಿನಿ ಷಟ್ಪದಿ.

2) ತೊರವೆಯ ರಾಮಾಯಣ – ಕುಮಾರ ವಾಲ್ಮೀಕಿ

MSS, Kan. PL-3; ಆಕಾರ : 13"x2"; ಗರಿ : 1-14.

3) ಗೀತೆಗೆ ಟೀಕು – ರಾಮಚಂದ್ರಾರ್ಯ

MSS, T.D. 3710; ಆಕಾರ : 12"x1¼ "; ಗರಿ : 1-160; ಸಂಸ್ಕೃತ ಶ್ಲೋಕ + ಕನ್ನಡ ಟೀಕೆ.

4) ದ್ವಾದಶಾನುಪ್ರೇಕ್ಷ – ವಿಜಯಣ್ಣ

MSS, Mack V. 29; ಆಕಾರ : 11 ½" x1 ½"; ಗರಿ : 1-103; ಸಾಂಗತ್ಯ

2. ಹಸ್ತಪ್ರತಿಗಳು (ಕೋರಿ ಕಾಗದ):

1) ಸಿಬಿರಾಯನ ಚರಿತ್ರೆ: ಪಂಚಯ್ಯ

MSS, B2; ಆಕಾರ : 9"x7"; ಹಾಳೆ : 1-28; ತ್ರಿಪದಿ.

2) ವಡೇರಪಟ್ಟು – ಕರ್ತೃ ?

MSS, B4; ಆಕಾರ : 6 7/8"x4 3/8 "; ಪುಟ: 1-145; ಗದ್ಯ. ಮೈಸೂರ ಒಡೆಯರ ಚರಿತ್ರೆ.

3) ಅನುಭವ ಶಿಖಾಮಣಿ – ನಾರಸಿಂಗ

MSS.D8; ಆಕಾರ : 8"x12"; ಹಾಳೆ : 1-99; ಭಾಮಿನಿ + ವಾರ್ಧಕ + ಶರಷಟ್ಪದಿ.

4) ಪ್ರಕೃತಿ ಸತ್ಯ – ಕರ್ತೃ ?

MSS, B. 430c; ಆಕಾರ : 8" x 6 ½"; ಹಾಳೆ 47–80; ಪ್ರಾಕೃತ + ಕನ್ನಡ ಟೀಕೆ.

3. ಕಡತಗಳು:

1) ಕಡತ – ಕರ್ತೃ ?

MSS. B.I. ಆಕಾರ : 7"x8"; ಮಡಿಕೆ 57 ಗದ್ಯ. ಬಡಿಗೆತನದ ಖರ್ಚಿನ ವಿವರ.

2) ಕುಂಬಟೆ ಮಾಗಣೆ ವಕಲು ವರ್ಗದ ಕಡತ ಧಾರೇಶ್ವರದ ಹಾಲಯ್ಯ

MSS. C2 ಆಕಾರ : 10"x9 ½" ; ಮಡಿಕೆ 77.

4. ಆಧುನಿಕ ಕಾಗದ ಹಸ್ತಪ್ರತಿ:

1) ಕನ್ನಡ ಹಸ್ತಪ್ರತಿಗಳ ಪಟ್ಟಿ – ಕರ್ತೃ ?

MSS. I.O. 2907 ಆಕಾರ : 9"x 1 1/2 "; ಪುಟ 1-32 ಗದ್ಯ. ಸುಮಾರು 500 ರಷ್ಟು ಸಂಸ್ಕೃತ, ಕನ್ನಡ, ತೆಲುಗು ಹಸ್ತಪ್ರತಿಗಳ ಯಾದಿ.

2) ಹುಕುಂನಾಮಾ – ಕರ್ತೃ ?

MSS. 10. 4537; ಆಕಾರ : 12"x8 ½ "; ಹಾಳೆ 1-9; ಗದ್ಯ. ರೆವಿನ್ಯೂ ವಿಷಯ.

5. ಇಂಗ್ಲಿಷ್ – ಕನ್ನಡ ಭಾಷೆಯ ಆಧುನಿಕ ಕಾಗದ ಹಸ್ತಪ್ರತಿಗಳು:

1) Kanarese Revenue terms- ಕರ್ತೃ? MSS. Eng. D-138; ಆಕಾರ : 13"x9"; ಹಾಳೆ 520-538.

ಕನ್ನಡ ರೆವಿನ್ಯೂ ಶಬ್ಧಗಳಿಗೆ ಇಂಗ್ಲೀಷಿನಲ್ಲಿ ಅರ್ಥ ; ರೋಮನ್ ಲಿಪಿ.

2) Polyglotal of Vocabulary Volume -1- ಕೋಲಬ್ರುಶ್.

MSS. 10. 156; ಆಕಾರ : 13"x9 ½ "; ಹಾಳೆ 1-189; ಅಮರ ಕೋಶಕ್ಕೆ ಸಂಸ್ಕೃತ, ಮರಾಠಿ, ಗುಜರಾಥಿ, ಕನ್ನಡ, ತೆಲುಗು, ತಮಿಳು ಭಾಷೆಗಳಲ್ಲಿ ಬರೆದ ಸಮಾನಾರ್ಥ ಪದಕೋಶ.

1978 ರಲ್ಲಿ ಡಾ: ಫ್ಲೀಟ್ ಸಿದ್ಧಪಡಿಸಿದ Pali Sanskrit and old canarese inscriptions from the Bombay Presidency and part of Madras Presidency and Maisur" ಎಂಬ ಗ್ರಂಥವು ಶಾಸನ ಪಾಠಗಳನ್ನೊಳಗೊಂಡಿದೆ ಎಂಬ ಅಭಿಪ್ರಾಯವನ್ನು ತಿದ್ದಿದ ಕಲಬುರ್ಗಿಯವರು ಇದು 286 ಶಾಸನಗಳ ಫೋಟೋ ಮತ್ತು ಇಂಗ್ಲಿಷ್ ಸಾರವಾಗಿದೆ ಎಂಬುದಾಗಿ ತಿಳಿಸಿಕೊಟ್ಟಿದ್ದಾರೆ.

2. **ಬ್ರಿಟಿಷ್ ಲೈಬ್ರರಿ:**

ಕಲಬುರ್ಗಿಯವರು ಈ ಗ್ರಂಥ ಭಂಡಾರಕ್ಕೆ ಭೇಟಿ ನೀಡಿ, ಇಲ್ಲಿ 93 ಭಾಷೆಗಳ ಮುದ್ರಿತ ಮತ್ತು ಹಸ್ತಲಿಖಿತ ಗ್ರಂಥಗಳಿವೆ ಎಂದೂ ಇಲ್ಲಿರುವ ಕನ್ನಡ ಹಸ್ತಪ್ರತಿಗಳನ್ನು ಹಸ್ತಪ್ರತಿ ಓದುವಲ್ಲಿ ಪರಿಣತನಲ್ಲದ ಕನ್ನಡಿಗನ ಸಹಾಯದಿಂದ ಸಿದ್ಧಪಡಿಸಿರುವ ರೋಮನ್ ಲಿಪಿಯಲ್ಲಿ ಸಿದ್ಧಪಡಿಸಿರುವ ಯಾದಿ ಎಂದು ತಿಳಿಸಿದ ಕಲಬುರ್ಗಿಯವರು ಈ ಯಾದಿ ದೋಷಪೂರ್ಣವಾಗಿರುವುದನ್ನು ಎತ್ತಿ ತೋರಿಸುತ್ತಾರೆ. ಡಾ: ಎಂ.ಎಂ. ಕಲಬುರ್ಗಿಯವರ ಶ್ರಮ ಪ್ರಯತ್ನದಿಂದ ಈ ಕೆಳಕಂಡ ಹಸ್ತಪ್ರತಿಗಳ ವಿವರ ನಮಗೆ ಲಭ್ಯವಾಗಿದೆ. ಅವುಗಳಲ್ಲಿ ಕೆಲವನ್ನು ಗಮನಿಸಲಾಗಿದೆ.

1. ತಾಳೆಗರಿ ಹಸ್ತಪ್ರತಿಗಳು – (ಕಾವ್ಯ):

1) ಅಶ್ವಮೇಧ – ಕರ್ತೃ ?

Add.12088; ಆಕಾರ 11"x1"; ಗರಿ ಯಕ್ಷಗಾನ

2) 'ಮಿಶ್ರಾರ್ಪಣ – ಕರ್ತೃ – ?

or. 9656; ಆಕಾರ: 10x1 3/4" , ಗರಿ 33-42. ವೀರಶೈವಕೃತಿ.

3) ಅಶ್ವಮೇಧ ಪರ್ವ (ಜೈಮಿನಿ ಭಾರತ) – ಲಕ್ಷ್ಮೀಶ

or. 6312; ಆಕಾರ: 15 ½" x 2", ಗರಿ: 1–163. ವಾರ್ಧಕ.

4) ತುಂಡು ಗರಿಗಳು – ಕರ್ತೃ ?

Add. 12092 ಯಾವುದೋ ಪತ್ರವಿರುವಂತಿದೆ.

2. ಕಡತ:

1) ರಾಮಾಯಣ ಪದ್ಯ, ದಾಸರ ಹಾಡು

ಸಂವತ್ಸರದ ಯಾದಿ ಇತ್ಯಾದಿ

or. 13343; ಆಕಾರ: 11" x 6", ಹಾಳೆ : 1–18.

3. ಆಧುನಿಕ ಕಾಗದ ಹಸ್ತಪ್ರತಿ:

1) A letter of Hajder Ali

Add 5358
ಇದರಲ್ಲಿ 6 ಸಾಲಿನ ಒಂದು ಕನ್ನಡ ಪತ್ರವಿದೆ.

2) ಬೆಳಗಾವಿಯ ಎರಡು ಶಾಸನಗಳು:

Add 14387 – iiic.
ಬೆಳಗಾವಿಗೆ ಸಂಬಂಧಪಟ್ಟ 2 ಜೈ ಶಾಸನಗಳ ಪಠ್ಯ

3) M.S.H. Thompson ಅವರ ನೋಟಬುಕ್

or 13080 (15)
ಅಭ್ಯಾಸಕ್ಕೆ ಬರೆದುಕೊಂಡ ಕನ್ನಡ-ಇಂಗ್ಲಿಷ್ ಬರವಣಿಗೆ.

**4. ಬ್ರಿಟಿಷ್ ಮ್ಯೂಜಿಯಂ:**

ಡಾ: ಕಲಬುರ್ಗಿಯವರು ಅಭಿಪ್ರಾಯ ಪಡುವಂತೆ ಇದೊಂದು ಭವ್ಯ ವಸ್ತು ಸಂಗ್ರಹಾಲಯ ಮತ್ತು ಗ್ರಂಥಾಲಯ. ಈ ಗ್ರಂಥಾಲಯಕ್ಕೆ ಭೇಟಿ ನೀಡಿದ ಕಲಬುರ್ಗಿಯವರು ಇಲ್ಲಿ ಯೂರೋಪ್ ಭಾಷೆ ಹೊರತಾಗಿ ಬೇರೆ ಯಾವ ಭಾಷೆಗೂ ಸಂಬಂಧಿಸಿದ ಹಸ್ತಪ್ರತಿಗಳಿಲ್ಲ ಎಂದು ತಿಳಿಸಿದ್ದಾರೆ.

**5. ರಾಯಲ್ ಏಶಿಯಾಟಿಕ್ ಸೊಸೈಟಿ:**

ಈ ಸಂಸ್ಥೆಯ ಬಗೆಗೆ ಕಲಬುರ್ಗಿಯವರು ವ್ಯಕ್ತಪಡಿಸಿದ ಅಭಿಪ್ರಾಯವನ್ನು ಗಮನಿಸಿದ್ದಾದರೆ 'ಸರ್ ವಾಲ್ಟರ್ ಇಲಿಯಟ್ ಸಿದ್ಧಪಡಿಸಿದ "Karnatak Desh Inscriptions" ಸಂಪುಟದ ಒಂದು ಪ್ರತಿ ಈ ಸಂಸ್ಥೆಯಲ್ಲಿದೆಯೆಂದು ಡಾ: ಫ್ಲೀಟ್ ಒಂದೆಡೆ ಸೂಚಿಸಿದ್ದಾರೆ. ಡಾ.

ನಂದಿಮಠ ಅವರು ಲಂಡನ್‌ನಲ್ಲಿದ್ದಾಗ ಇದನ್ನು ಅಭ್ಯಾಸ ಮಾಡಿ ಕೆಲವುಶಾಸನಗಳನ್ನು "ಶಿವಾನುಭವ" ಪತ್ರಿಕೆಯ ಮೂಲಕ ಪ್ರಕಟಿಸಿದ್ದರು. 595 ಕನ್ನಡ ಶಾಸನಗಳ ಈ ಸಂಪುಟವನ್ನು ಅಭ್ಯಸಿಸಲು ಸಾಧ್ಯವಾದರೆ ಇಡೀ ಸಂಪುಟವನ್ನು ಝೆರಾಕ್ಸ್ ಮಾಡಿಕೊಂಡು ಬರಲು ಈ ಸಂಸ್ಥೆಗೆ ಹೋದೆನು. ಆದರೆ ಅಲ್ಲಿಯ ಗ್ರಂಥಪಾಲಕ ಈ ಬಗ್ಗೆ ಆಸಕ್ತಿ ತೋರಿಸಲಿಲ್ಲ. ನಾನೇ ಕ್ಯಾಟಲಾಗ್ ನೋಡಿ, ಕಪಾಟು ತೆರೆದು ಹುಡುಕಿದೆ ಸಿಗಲಿಲ್ಲ. ಕನಕದಾಸರ ಮೋಹನ ತರಂಗಿಣಿಯ ಒಂದು ತಾಳೆಪ್ರತಿ ಮಾತ್ರ ಸಿಕ್ಕಿತು."[6]

ಕಲಬುರ್ಗಿಯವರು ಹಸ್ತಪ್ರತಿಗಳ ಶೋಧಕ್ಕಾಗಿ ಎಷ್ಟು ಆಸಕ್ತಿವಹಿಸಿದ್ದರೆಂದು ಈ ಮೇಲಿನ ಮಾತುಗಳಿಂದ ತಿಳಿಯಬಹುದು. ತಾವು ಹುಡುಕುತ್ತಿದ್ದ ಹಸ್ತಪ್ರತಿ ಸಿಗಲಿಲ್ಲವಾದರೂ ತಮ್ಮ ಶ್ರಮಕ್ಕೆ ಪ್ರತಿಫಲವಾಗಿ ಮೋಹನ ತರಂಗಿಣಿಯ ಒಂದು ತಾಳೆ ಪ್ರತಿ ಸಿಕ್ಕಿತು. ಅದರ ಆಕಾರ: 8 ½ x 2: ಗರಿ: 1-157 ಎಂದು ತಿಳಿಸಿದ್ದಾರೆ.

6. **ಸ್ಕೂಲ್ ಆಫ್ ಓರಿಯಂಟಲ್ ಆ್ಯಂಡ್ ಆಫ್ರಿಕನ್ ಸ್ಟಡೀಜ್:**

ಕಲಬುರ್ಗಿಯವರು ಇಲ್ಲಿಗೆ ಭೇಟಿ ನೀಡಿ ಲಂಡನ್ ವಿಶ್ವವಿದ್ಯಾಲಯದ ಒಂದು ಶಾಖೆಯಾದ ಇಲ್ಲಿ ದ್ರಾವಿಡ ಭಾಷೆಗಳಲ್ಲಿ ತಮಿಳು ಅಧ್ಯಯನಕ್ಕೆ ಅವಕಾಶವಿದೆ ಎಂದೂ ಈ ಗ್ರಂಥಾಲಯದ ಕ್ಯಾಟಲಾಗ್‌ನಲ್ಲಿ 4 ಕನ್ನಡ ಹಸ್ತಪ್ರತಿಗಳ ಸೂಚನೆ ಸಿಕ್ಕಿತು ತಮಗೆ 3 ಲಭ್ಯವಾಗಿರುವುದಾಗಿ ತಿಳಿಸಿದ್ದಾರೆ. ಅವರ ಪರಿಶ್ರಮದಿಂದ ಈ ಕೆಳಕಂಡ ಕನ್ನಡ ಹಸ್ತಪ್ರತಿಗಳು ನಮಗೆ ದೊರೆತಿದೆ.

1. **ತಾಳೆಗರಿ ಹಸ್ತಪ್ರತಿ :**

1) **ಲೀಲಾವತಿ – ನೇಮಿಚಂದ್ರ**

41908: ಆಕಾರ: 17 x 16 ½ : ಗರಿ : 1-207 ಚಂಪೂಕೃತಿ.

2. **ಆಧುನಿಕ ಕಾಗದ ಹಸ್ತಪ್ರತಿಗಳು:**

1) Religious writings in canarese 7078: ಆಕಾರ: 13"x7": ಹಾಳೆ: 1 +137+1 ಕ್ರೈಸ್ತ ಧರ್ಮದ ಗದ್ಯಗ್ರಂಥ.

3. Catholic tracts in canarese 2909: ಆಕಾರ:7x10": ಹಾಳೆ:80. ಕ್ರೈಸ್ತ ಧರ್ಮದ ಗದ್ಯಗ್ರಂಥ.

5. **ವೆಲ್‌ಕಮ್ ಇನ್‌ಸ್ಟಿಟ್ಯೂಟ್ ಆಫ್ ಹಿಸ್ಟರಿ ಆಫ್ ಮೆಡಿಶನ್:**

ಊಸ್ಟನ್ ರಸ್ತೆಯ ಮೇಲಿರುವ ಈ ಸಂಸ್ಥೆಗೆ ಭೇಟಿ ನೀಡಿದ ಕಲಬುರ್ಗಿಯವರು ಈ ಸಂಸ್ಥೆಯಲ್ಲಿ ಔಷಧ ಶಾಸ್ತ್ರಕ್ಕೆ ಸಂಬಂಧಪಟ್ಟ ಪ್ರಾಚೀನ ಹಸ್ತಪ್ರತಿಗಳ ಸಂಗ್ರಹದ ಬಗೆಗೆ ಮಾಹಿತಿ ನೀಡುತ್ತಾರೆ. ಹಿಬ್ರು ಭಾಷೆಯ ವಿದ್ವಾಂಸ ಆ್ಯಲನ್ ಸಹಾಯದಿಂದ

ಕಲಬುರ್ಗಿಯವರು ಈ ಕೆಳಕಂಡ ಕನ್ನಡ ಕೈ ಬರಹ ಪ್ರತಿಗಳನ್ನು ಶೋಧಿಸಿ ನಮಗೆ ಮಾಹಿತಿ ನೀಡಿದ್ದಾರೆ.

1) ಅಷ್ಟಾವರಣ ಸ್ತೋತ್ರ – ಸಂಪಾದನೆಯ ಸಣ್ಣ ಬರಹದ ಗುರು ಬಸವರಾಜ ದೇವರು.

Well Kan-1. ಆಕಾರ: 10"x2: ಗರಿ : 1–37. ವೀರಶೈವ ಕೃತಿ, ಸಂಸ್ಕೃತ ಶ್ಲೋಕ + ಕನ್ನಡ ಟೀಕೆ.

2) ಪತ್ರ ?

Well Kan-2. ಆಕಾರ: 13"x17: ಹಾಳೆ 1 ಬ್ರಿಟಿಷ್ ರೆಸಿಡೆಂಟ್ ಅವರಿಗೆ ಬರೆದ ಪತ್ರ.

7. **ಬೈಬಲ್ ಸೊಸೈಟಿ:**

ಕ್ವೀನ್ ವಿಕ್ಟೋರಿಯಾ ರಸ್ತೆಯ ಮೇಲಿರುವ ಬೈಬಲ್ ಸಾಹಿತ್ಯವನ್ನು ಪ್ರಕಟಿಸುವ, ಪ್ರಸಾರ ಮಾಡುವ ಈ ಸಂಸ್ಥೆಗೆ ಭೇಟಿ ನೀಡಿದ ಎಂ.ಎಂ.ಕಲಬುರ್ಗಿಯವರು ಆಧುನಿಕ ಕಾಗದದ ಮೇಲೆ ಬರೆದ ಕೆಲವು ಹಸ್ತಪ್ರತಿಗಳನ್ನು ಶೋಧಿಸಿದ್ದಾರೆ.

1) Brows Kannada Bible
2) " " "
3) " " "

ನಂಬರ್ ಕೊಟ್ಟಿಲ್ಲ : ಆಕಾರ : 8 ½ x 13; ಪಾನು ಕ್ರಮವಾಗಿ 1–117; 1–95, 1–202 ಗದ್ಯ

4) The Gospel according to St. Luke ನಂಬರ್ ಕೊಟ್ಟಿಲ್ಲ; ಆಕಾರ: 8 ½ x 13"; ಹಾಳೆ 1–108. ಕ್ರೈಸ್ತ ಧರ್ಮದ ಗದ್ಯ ಗ್ರಂಥ.

ಒಟ್ಟಾರೆ [7]"ಕರ್ನಾಟಕಕ್ಕೆ ಸಂಬಂಧಿಸಿದ ಕೈಬರಹದ ಸಂಪತ್ತನ್ನು ಸಾಹಿತ್ಯ ಕೃತಿ ಮತ್ತು ಚರಿತ್ರೆಯ ದಾಖಲೆಯೆಂದು ವರ್ಗೀಕರಿಸಿದರೆ ಇಂಗ್ಲೆಂಡ ದೇಶದಲ್ಲಿ ಚರಿತ್ರೆಯ ದಾಖಲೆಗಳೇ ಅಧಿಕ. ಎಲ್ಲಾ ಸಂಸ್ಥೆಗಳಗಿಂತ ಇಂಡಿಯಾ ಆಫೀಸ್ ಲೈಬ್ರರಿಯಲ್ಲಿಯೇ ಈ ಎರಡೂ ಬಗೆಯ ಸಾಮಗ್ರಿ ಹೆಚ್ಚು ಹಳೆಯ ಮುದ್ರಿತ ಕನ್ನಡ ಗ್ರಂಥಗಳು ಈ ಎಲ್ಲ ಸಂಸ್ಥೆಗಳಲ್ಲಿದ್ದರೂ ಬ್ರಿಟಿಷ್ ಲೈಬ್ರರಿಯಲ್ಲಿ ಈ ಸಂಖ್ಯೆ ಅಧಿಕವಾಗಿದೆ. ಆದುದರಿಂದ, ಇಲ್ಲಿಯ ಚರಿತ್ರೆಯ ದಾಖಲೆಗಳನ್ನು (ಕನ್ನಡ, ಇಂಗ್ಲಿಷ್) ಹಳೆಯ ಮುದ್ರಿತ ಗ್ರಂಥಗಳನ್ನು ಅಭ್ಯಸಿಸುವುದು ಅವಶ್ಯವಿದೆ."[7]

ದೇಶ–ವಿದೇಶಗಳನ್ನು ಸುತ್ತಿ ಹಸ್ತಪ್ರತಿಗಳ ಶೋಧನೆ ಮಾಡಿ ಹೆಗ್ಗಳಿಕೆಗೆ ಪಾತ್ರರಾದ ಕಲಬುರ್ಗಿಯವರ ಈ ಮೇಲಿನ ಮಾತನ್ನು ಗಮನಕ್ಕೆ ತೆಗೆದುಕೊಳ್ಳುವುದು ಅವಶ್ಯ. ಈ

ಮೂಲಕವಾಗಿ ಡಾ: ಎಂ.ಎಂ. ಕಲಬುರ್ಗಿಯವರನ್ನು ಈ ತಲೆಮಾರಿನ ಕನ್ನಡದ ಒಬ್ಬ ಸುಪ್ರಸಿದ್ಧ ಸಂಶೋಧಕ ಎಂದು ಕರೆಯಬಹುದು.

**ಇ. ಕಲಬುರ್ಗಿಯವರ ಸಂಶೋಧನೆ ಹಾಗೂ ವಿಭಿನ್ನ ಮುಖ ಅಧ್ಯಯನ:**

ಕಲಬುರ್ಗಿಯವರು ವಿದೇಶಗಳಲ್ಲಿ ತಮ್ಮ ಸಂಶೋಧನೆಯ ಮುಖಾಂತರ ವಿಖ್ಯಾತರಾಗಿದ್ದರಲ್ಲದೆ ತಮ್ಮ ವಿಭಿನ್ನ ಮುಖ ಅಧ್ಯಯನದಿಂದಲೂ ದೇಶಿ ಓದುಗರ ಗಮನ ಸೆಳೆದಿರುವುದು ಗಮನಾರ್ಹ ಸಂಗತಿ. ಎಂ.ಎಂ. ಕಲಬುರ್ಗಿಯವರು ತಮ್ಮ ಸಂಶೋದನೆಯ ಮೂಲಕ ಹಸ್ತಪ್ರತಿಗಳನ್ನು ಸಂಗ್ರಹಿಸುವಲ್ಲಿ ಪ್ರಯತ್ನಶೀಲತೆ ಅವುಗಳನ್ನು ಓದುವಲ್ಲಿ ಸಹನಶೀಲತೆ, ಅವುಗಳ ವಂಶಾವಳಿ ನಿರ್ಣಯಿಸುವಲ್ಲಿ ಸಮಾಧಾನ ಪ್ರವೃತ್ತಿ, ಪಾಠ ಸಂಕಲನದಲ್ಲಿ ಪ್ರಾಮಾಣಿಕತೆ, ಪಾಠ ನಿರ್ಣಯಿಸುವಲ್ಲಿ ತೂಕ ಪ್ರಜ್ಞೆ ಇತರ ಸಂಶೋಧಕರೂ ಅನುಸರಿಸಬೇಕಾದ ಮುಖ್ಯ ಅಂಶಗಳು.

ಎಂ.ಎಂ. ಕಲಬುರ್ಗಿಯವರು ಶಾಸನ, ಶಾಸ್ತ್ರ, ಜನಪದ ಸಾಹಿತ್ಯ, ವಿಮರ್ಶೆ ಮಾರ್ಗಗಳ ಮೂಲಕ ಯಾವ ರೀತಿ ವಿಭಿನ್ನವಾಗಿ ಅಧ್ಯಯನದಲ್ಲಿ ತೊಡಗಿದ್ದಾರೆ ಎಂಬುದನ್ನು ಕೆಳಕಂಡಂತೆ ವಿವರಿಸಬಹುದು.

[8]"ಜೀವನವು ನಿತ್ಯವೂ ಓದಿ ಎಸೆಯುವ ವೃತ್ತ ಪತ್ರಿಕೆಯಾಗದೆ ಅನುದಿನವೂ ಆಸಕ್ತಿ ಕೆರಳಿಸುವ ಮಹಾಕಾವ್ಯವಾಗಬೇಕು" ಎನ್ನುವ ಆದರ್ಶ ಕಲಬುರ್ಗಿಯವರದು. ಇಂದು ಸಂಶೋಧನೆ ಮಾಡಬಯಸುವ ಎಲ್ಲರಿಗೂ ಅವರು ಮಹಾಕಾವ್ಯವೇ ಆಗಿದ್ದಾರೆ."[8]

**ಶಾಸನ ಮಾರ್ಗ:**

ಎಂ.ಎಂ. ಕಲಬುರ್ಗಿಯವರು ಇದುವರೆಗೆ ರಚಿತವಾದ 63 ಕೃತಿಗಳಲ್ಲಿ ನೇರವಾಗಿ ಶಾಸನಕ್ಕೆ ಸಂಬಂಧಿಸಿದ ಕೃತಿಗಳು 14. ಅವುಗಳನ್ನು ಅಭ್ಯಾಸದ ಅನುಕೂಲಕ್ಕಾಗಿ ಮೂರು ವಿಭಾಗವಾಗಿ ವಿಂಗಡಿಸಿಕೊಳ್ಳಬಹುದು.

1. **ಆಕರ ಸಂಶೋಧನೆ:**

ಸೂಚಿಗಳು : 1) ಧಾರವಾಡ, ವಿಜಾಪುರ ಜಿಲ್ಲೆ ಶಾ.ಸೂ.

ಶಾಸನಗಳು: 2) ಧಾರವಾಡ ತಾಲ್ಲೂಕಿನ ಶಾಸನಗಳು

3) ಶಾಸನ ಸಂಪದ

4) ಶಾಸನ ಸೂಕ್ತಿ ಸುಧಾರ್ಣವ.

2. **ವಿಶ್ಲೇಷಣಾತ್ಮಕ ಸಂಶೋಧನೆ:**

1) ಬಸವಣ್ಣನವರನ್ನು ಕುರಿತ ಶಾಸನಗಳು

2) ಶಾಸನಗಳಲ್ಲಿ ಶಿವಶರಣರು

3) ಶಾಸನ ವ್ಯಾಸಾಂಗ ಭಾಗ-1

4) ಮಹಾರಾಷ್ಟ್ರದ ಕನ್ನಡ ಶಾಸನಗಳು.

3. **ವ್ಯಾಖ್ಯಾನಾತ್ಮಕ ಸಂಶೋಧನೆ:**

1) ಶಾಸನ ವ್ಯಾಸಾಂಗ ಭಾಗ -2

2) ಮಾರ್ಗ -2 ಸಂಪುಟದ 'ಶಾಸನ ಮಾರ್ಗ'

3) ಐತಿಹಾಸಿಕ

4) ಮಾರ್ಗ 3 ಸಂಪುಟದ ಕೆಲವು ಲೇಖನಗಳು

5) ಸಮಾಧಿ - ಬಲಿದಾನ - ವೀರಮರಣ ಸ್ಮಾರಕಗಳು.

ಈ ವಿಭಾಗಗಳ ಮೂಲಕ ಎಂ.ಎಂ. ಕಲಬುರ್ಗಿಯವರು ಶಾಸನಗಳಿಂದ ಏನನ್ನು ಶೋಧಿಸಿದ್ದಾರೆ ಎಂಬುದನ್ನು ಈ ಕೆಳಕಂಡಂತೆ ತಿಳಿಯಬಹುದು.

**ಧಾರವಾಡ, ವಿಜಾಪುರ ಜಿಲ್ಲೆಗಳ ಶಾಸನ ಸೂಚಿ:**

ಧಾರವಾಡ ಜಿಲ್ಲೆಯಲ್ಲಿ ಒಟ್ಟು 2139 ಶಾಸನಗಳನ್ನು ಕಲಬುರ್ಗಿಯವರು ಗುರ್ತಿಸಿದ್ದಾರೆ. ಅವರ ಸಮೀಕ್ಷೆಯಂತೆ ಪ್ರಕಟಿತ ಶಾಸನಗಳು 1196, ಅಪ್ರಕಟಿತ ಶಾಸನಗಳು 947. ಈ ವಿವರಗಳನ್ನು ಕಲಬುರ್ಗಿಯವರು ARIE, IA, EI, MAR, SII ಸಂಪುಟಗಳಲ್ಲಿ ಸಂಗ್ರಹಿಸಿದ್ದಾರೆ. ಕಲಬುರ್ಗಿಯವರು ಬಿಜಾಪುರ ಜಿಲ್ಲೆಯ ಒಟ್ಟು 1061 ಶಾಸನಗಳಲ್ಲಿ ಪ್ರಕಟಿತ ಶಾಸನಗಳು 918. ಅಪ್ರಕಟಿತ ಶಾಸನಗಳು 143. ಈ ಎಲ್ಲಾ ವಿವರಗಳನ್ನು ನೀಡುವ ಜೊತೆಗೆ ಕಲಬುರ್ಗಿಯವರು

ವ್ಯವಸ್ಥಿತ ರೂಪದಲ್ಲಿ ಗ್ರಾಮ ಸಂಖ್ಯೆ, ಶಾಸನ ಸಂಖ್ಯೆ, ಗ್ರಾಮದ ಹೆಸರು, ಶಾಸನ ವರದಿ, ವರ್ಷ ಮತ್ತು ಸಂಖ್ಯೆ, ದೊರೆತ ಸ್ಥಳ, ಅರಸ, ಮಿತಿ, ಪ್ರಕಟಣೆ ಮೊದಲಾದ ವಿಷಯಗಳ ಮೂಲಕ ಕಲಬುರ್ಗಿಯವರು ವಿಂಗಡಿಸಿ ಕೊಟ್ಟಿದ್ದಾರೆ.

**ಧಾರವಾಡ ತಾಲ್ಲೂಕಿನ ಶಾಸನಗಳು:**

ಧಾರವಾಡ ತಾಲ್ಲೂಕಿನ ಶಾಸನಗಳು 74 ಎಂದು ಗುರ್ತಿಸಿದ ಕಲಬುರ್ಗಿಯವರು ಶಾಸನಗಳ ಪಾಠಗಳನ್ನು ವ್ಯವಸ್ಥಿತವಾಗಿ, ಕ್ರಮಬದ್ಧವಾಗಿ ಪ್ರಕಟಗೊಂಡಿದ್ದರೂ ಅವುಗಳ ಸಮಗ್ರ ಪರಿವೀಕ್ಷಣೆ ನಡೆದಿಲ್ಲ ಎನ್ನುವುದೇ ಅವರ ಅಭಿಪ್ರಾಯ. [10]"ಓಣಿಯಿಂದ ಓಣಿಗೆ, ಹಳ್ಳಿಯಿಂದ ಹಳ್ಳಿಗೆ ವ್ಯವಸ್ಥಿತವಾಗಿ ಪರಿವೀಕ್ಷಣೆ ನಡೆಸಿದರೆ ಈಗ ದೊರೆತ ಶಾಸನಗಳಷ್ಟು ಹೊಸ ಶಾಸನಗಳು ಸಿಗುವ ಸಂಭವವಿದೆ"[10] ಎಂಬುದು ಕಲಬುರ್ಗಿಯವರ ಲೆಕ್ಕಾಚಾರ.

ಡಾ: ಎಂ.ಎಂ. ಕಲಬುರ್ಗಿಯವರು ಧಾರವಾಡ ತಾಲ್ಲೂಕಿನ ಶಾಸನಗಳ ಪಠ್ಯವನ್ನು ಮೂರು ಸ್ತರಗಳಲ್ಲಿ ನೀಡುತ್ತಾರೆ.

1. ಶಾಸನದ ಕ್ರಮಾಂಕ, ಅದರ ಕೆಳಗೆ ಗ್ರಾಮನಾಮ, ಅದರ ಕೆಳಗೆ ಕಾಲವನ್ನು ಕೊಡುತ್ತಾರೆ. ಎಡಭಾಗದಲ್ಲಿ ಶಾಸನ ವರದಿಯಾದ ವರ್ಷ ಮತ್ತು ಸಂಖ್ಯೆ, ಬಲಭಾಗದಲ್ಲಿ ಶಾಸನ ಪ್ರಕಟಗೊಂಡ ವಿವರಗಳು.
2. ಶಾಸನ ಕಲ್ಲಿನ ಸ್ಥೂಲ ಪರಿಚಯ, ದೊರೆತ ಸ್ಥಳ, ಚಿತ್ರಗಳು, ಗಾತ್ರಗಳು, ಶಾಸನದ ಸಾರಾಂಶ.
3. ಶಾಸನದ ಪರಿಷ್ಕೃತ ಪಾಠವನ್ನು ಕಲ್ಲಿನಲ್ಲಿರುವಂತೆ ಸಾಲು ಸಾಲಾಗಿ ನೀಡುತ್ತಾರೆ.

**ಶಾಸನ ಸಂಪದ:**

ಕರ್ನಾಟಕದ ಇತಿಹಾಸ ಮತ್ತು ಸಂಸ್ಕೃತಿಯ ಅಧ್ಯಯನಕ್ಕೆ ಅನುಕೂಲಕ್ಕಾಗಿ 1968 ರಲ್ಲಿ ಸಂಪಾದಿಸಿದ ಕೃತಿಯಿದು. [11]"ವಿವಿಧ ಧರ್ಮಗಳನ್ನು ಪ್ರತಿನಿಧಿಸುವ, ಕರ್ನಾಟಕದ ಪ್ರಮುಖ ರಾಜಮನೆಗನಗಳನ್ನು ಪ್ರತಿನಿಧಿಸುವ, ಉತ್ಕೃಷ್ಟ ಜೀವನ ಮೌಲ್ಯಗಳನ್ನು ತಿಳಿಹೇಳುವ ಶಾಸನಗಳು ಇಲ್ಲವೆ. ಹೀಗೆ ಎಲ್ಲದರಲ್ಲಿಯೂ ಸಮಗ್ರವಾಗಿ ಕರ್ನಾಟಕದ ಶಾಸನ ಸಂಪತ್ತನ್ನು ಪರಿಚಯಿಸುವ ಪ್ರಾತಿನಿಧಿಕವಾದ 30 ಶಾಸನಗಳನ್ನು ಈ ಪುಸ್ತಕದಲ್ಲಿ ಸಂಪಾದಿಸಿಕೊಟ್ಟಿದ್ದಾರೆ."[11]

**ಸೂಕ್ತಿ ಸುಧಾರ್ಣವ:**

[12]"ಶುಭತುಂಗದೇವ [94-7], ನಾರಸಿಂಹ [96-20, ದಕ್ಷಿಣ ಚಕ್ರವರ್ತಿ [9621] ಮುಂತಾದ ಬಿರುದು ಮತ್ತು ಹೆಸರುಗಳನ್ನೊಳಗೊಂಡ ಪದ್ಯಗಳು ಈ ಕೃತಿಯಲ್ಲಿ ಆಗಾಗ ಕಣ್ಣಿಗೆ ಬೀಳುತ್ತದೆ."[12]

ಇವುಗಳಲ್ಲಿ ಶಾಸನ ಪ್ರಪಂಚಕ್ಕೆ ಸಂಬಂಧಿಸಿದ ಪದ್ಯಗಳನ್ನು ಸೂಕ್ತಿ ಸುಧಾರ್ಣವರ ಸಂಪಾದಕರು ಹೀಗೆ ನೀಡುತ್ತಾರೆ.

1. [13] "ಇಂದಿರಾದರಿ ಭೂಪಾಳದ - 1-16 ECV-ii ಅರಸೀಕೆರೆ 62

2. ಸಿರಿವಕ್ಷೋರಂಗದೊಳ್ - 56 EC-iii ಮಂಡ್ಯ 77"[13]

ಇಲ್ಲಿನ ಪದ್ಯಗಳನ್ನು ಶಾಸನಗಳಲ್ಲಿ ಹುಡುಕುವ ಪ್ರಯತ್ನ ಎಂ.ಎಂ. ಕಲಬುರ್ಗಿಯವರು ನಡೆಸಿದ್ದಾರೆ.

[14]"ಇದಿರಾದರಿ ಭೂಪಾಳರ ....... ಎಂಬುದು

ಲಾಲನ ಕೆರೆ, ಅರಸಿಕೆರೆ, ಬೆಳಗುಂಭ, ಹಿರುಯೂರು - ಹೀಗೆ

4 ಶಾಸನಗಳಲ್ಲಿಯೂ .... "ಸಿರಿ ವಕ್ಷೋರಂಗದೊಳ್" .....

"ಮುನ್ನಂ ರೂಡಿಯ ಕೃಷ್ಣ ......." ಎಂಬಿವು ಮಂಡ್ಯ 122 ನೆಯ ಬಸರಾಳು ಶಾಸನಗಳಲ್ಲಿವೆ"[14] ಎಂದು ಕಲಬುರ್ಗಿಯವರು ಗುರ್ತಿಸಿದ್ದಾರೆ.

**ಬಸವಣ್ಣನವರ ಕುರಿತ ಶಾಸನಗಳು:**

ಡಾ: ಎಂ.ಎಂ. ಕಲಬುರ್ಗಿಯವರು ಈ ಶಾಸನದ ಪ್ರಕಾರ

1) ಶರಣರ ದೃಷ್ಟಿ - ಶಾಸನ ದೃಷ್ಟಿ

2) ಬಸವಣ್ಣನವರನ್ನು ಕುರಿತ ಶಾಸನಗಳು ಎಂಬುದಾಗಿ ವಿಭಾಗಿಸಿರುವುದು ಗಮನಾರ್ಹ.

ಫ್ಲೀಟ್, ಹಳಕಟ್ಟಿ, ಗೋವಿಂದ ಪೈ ಮುಂತಾದವರು ಮತ್ತು ಕಲಬುರ್ಗಿಯವರೆ ಸ್ವತಃ ಗುರ್ತಿಸಿದ ಶಾಸನಗಳನ್ನು ಸೇರಿಸಿ, ಬಸವಣ್ಣನವರನ್ನು ಕುರಿತಾತಿ 18 ಶಾಸನಗಳ ಪಟ್ಟಿ ಮಾಡಿ, ನಂತರ ಖಚಿತವಾಗಿ ಬಸವಣ್ಣನವರಿಗೆ ಸಂಬಂಧಿಸಿದ ಶಾಸನಗಳೆಂಬುದಾಗಿ ವಿಭಾಗಿಸಿ ಶಾಸನ ಪಠ್ಯಗಳನ್ನು ಎಳೆ ಎಳೆಯಾಗಿ ಬಿಡಿಸಿ ನೋಡಿದ ಕಲಬುರ್ಗಿಯವರು ಬಸವಣ್ಣನವರ ಚಾರಿತ್ರಿಕತೆಯ ಬಗೆಗೆ ಇದ್ದ ಅನುಮಾನಗಳನ್ನೆಲ್ಲ ಈ ಕೃತಿ ರಚನೆಯ ಮೂಲಕ ತಳ್ಳಿಹಾಕಿದ್ದಾರೆ.

[15]"ಮಂಗಳ ಕೀರ್ತಿ ಪುರಾತನ ।
ಜಂಗಮ ಲಿಂಗೈಕ ಭಕ್ತಿ ನಿರ್ಭರ ಲೀಲಾ ।
ಸಂಗಂ ಸಂಗನ ಬಸವಂ ।
ಸಂಗತಿಯಂ ಮಾಳ್ಕೆ ಭಕ್ತಿಯೊಳಗನವರತಂ ॥"[15]

ತಮಗೆ ದೊರೆತ ಅರ್ಜುನವಾಡು ಶಾಸನದಲ್ಲಿನ ಬಸವಣ್ಣನ ವ್ಯಕ್ತಿ ಚಿತ್ರಣವನ್ನು ಕಲಬುರ್ಗಿಯವರು ಇಲ್ಲಿ ಬಿಂಬಿಸಿದ್ದಾರೆ.

ಶಾಸನ ಸಂಪುಟ, ಹೇಮಕೂಟ, ಶಿವಾನುಭವ, ಮುಂತಾದ ಪ್ರಕಟಣೆಗಳಲ್ಲಿ 25 ಸಾವಿರ ಶಾಸನಗಳಿಂದ 90 ಜನ ಶಿವಶರಣರನ್ನು ಗುರ್ತಿಸಿದ ಕೀರ್ತಿ ಮತ್ತು ದೇವರಗುಡಿ ಮತ್ತು ಕೊಂಡಗುಳಿಯ ಎರಡು ಅಪ್ರಕಟಿತ ಶಾಸನಗಳ ಬಗೆಗೆ ಕಲಬುರ್ಗಿಯವರು ತಿಳಿಸಿದ್ದಾರೆ.

ಶಾಸನ ವ್ಯಾಸಂಗ, ಮಾರ್ಗ 2, ಮಾರ್ಗ-3 ಅಲ್ಲದೆ ಸಮಾಧಿ, ಬಲಿದಾನ, ವೀರಮರಣ ಸ್ಮಾರಕಗಳೆಂದು ವಿಭಾಗಿಸಿ, ಕಲಬುರ್ಗಿಯವರು ಪ್ರತಿಯೊಂದಕ್ಕೂ ಶಾಸನಗಳ ಮೂಲಕ ಮಹತ್ವದ ಅಂಶಗಳನ್ನು ಗುರ್ತಿಸಿಕೊಟ್ಟಿದ್ದಾರೆ.

[16]"ಕನ್ನಡ ಸಂಶೋಧನ ಮಾರ್ಗದಲ್ಲಿ ಡಾ. ಚಿದಾನಂದಮೂರ್ತಿಯವರು ಶಾಸನಗಳ ಸಾಂಸ್ಕೃತಿಕ ಅಧ್ಯಯನದ ಮೂಲಕ ಹೊಸ ಜಾಡು ಹಿಡಿದರೆ ಅದಕ್ಕೆ ಕಲಬುರ್ಗಿಯವರು ವಿವಿಧ ಆಯಾಮಗಳನ್ನು ಒದಗಿಸಿದರು."[16] ಎಂ.ಎಂ. ಕಲಬುರ್ಗಿಯವರು ಶಾಸನಾಧ್ಯಯನ ಮಾಡುವಾಗ ವಿಷಯದ ಬಗೆಗಿನ ಸಮಸ್ಯೆಗಳನ್ನು ಎತ್ತಿಕೊಂಡು ಶಾಸನಗಳ ಆಕರಗಳನ್ನು ಶೋಧಿಸಿ, ವಿಶ್ಲೇಷಿಸುವ ಪ್ರವೃತ್ತಿ ಓದುಗರಿಗೆ ದಾರಿದೀಪವಾಗಿದೆ.

**ಶಾಸ್ತ್ರ ಮಾರ್ಗ:**

ಗ್ರಂಥ ಸಂಪಾದನಾಶಾಸ್ತ್ರ, ಭಾಷಾಶಾಸ್ತ್ರ, ಶಾಸನಶಾಸ್ತ್ರ, ಜಾನಪದಶಾಸ್ತ್ರ, ನಾಮಶಾಸ್ತ್ರ – ಈ ಎಲ್ಲ ಕ್ಷೇತ್ರಗಳಲ್ಲಿ ದುಡಿದು ಅವುಗಳನ್ನು ದುಡಿಸಿಕೊಳ್ಳುವುದರ ಮೂಲಕ ಉನತ್ತ ಪರಂಪರೆಯನ್ನು ನಡೆಸಿಕೊಂಡು ಬಂದಂತಹವರಲ್ಲಿ ಡಾ: ಎಂ.ಎಂ. ಕಲಬುರ್ಗಿಯವರು ಒಬ್ಬರು.

ಶಾಸ್ತ್ರ ಸಂಶೋಧನೆ ಇಂದು ಜನಾಧರಣೆ ಆಕರ್ಷಣೆಗಳಮದ ದೂರ ಉಳಿದ ಕ್ಷೇತ್ರ. ಈ ಕ್ಷೇತ್ರದ ಅಧ್ಯಯನಗಳಲ್ಲಿ ವಿಶೇಷವಾಗಿ ತೊಡಗಿದ ಸಾಹಿತಿಗಳು, ವಿದ್ವಾಂಸರುಗಳ ಸಂಖ್ಯೆ ಅತ್ಯಲ್ಪ. ಡಾ: ಎಂ.ಎಂ. ಕಲಬುರ್ಗಿಯವರು ಶಾಸ್ತ್ರ ಮಾರ್ಗದಲ್ಲಿ ಶ್ರದ್ಧೆ, ಆಸಕ್ತಿ, ಪ್ರೀತಿ ವಹಿಸಿ, ಈ ಪರಂಪರೆಯಲ್ಲಿ ಮುಂದಿನ ತಲೆಮಾರು ದುಡಿಯುವಂತೆ ಗಮನಸೆಳೆದ ವಿದ್ವಾಂಸರುಗಳಲ್ಲಿ ಕಲಬುರ್ಗಿಯವರು ಮೊದಲಿಗರು ಎಂದು ಹೇಳಬಹುದು.

[17]"ಕಲಬುರ್ಗಿಯವರ ಕನ್ನಡ ಗ್ರಂಥಸಂಪಾದನಾಶಾಸ್ತ್ರ, ಸಾಹಿತ್ಯ ಸಂಪಾದನೆ, ಹಸ್ತಪ್ರತಿಶಾಸ್ತ್ರ, ಸಂಶೋಧನಾಶಾಸ್ತ್ರ, ಕನ್ನಡ ನಾಮವಿಜ್ಞಾನ ಕೃತಿಗಳು, ವ್ಯಾಕರಣ ಮತ್ತು ಛಂದಸ್ಸನ್ನು ಕುರಿತಾದ ಲೇಖನಗಳನ್ನು ಶಾಸ್ತ್ರ ಸಂಶೋಧನ ವ್ಯಾಪ್ತಿಗೆ ಸೇರುತ್ತವೆ."[17]

ಈ ಅಧ್ಯಯನದಲ್ಲಿ ಹಸ್ತಪ್ರತಿಶಾಸ್ತ್ರ, ಗ್ರಂಥಸಂಪಾದನಾಶಾಸ್ತ್ರ ಸಂಶೋಧನಾ ಶಾಸ್ತ್ರಗಳ ಬಗೆಗೆ ಸಂಪೂರ್ಣ ವಿಚಾರಗಳ ಚರ್ಚೆ ಅವಕಾಶವಿದ್ದರೂ ಸಂಪ್ರಬಂಧದ ದೃಷ್ಟಿಯಿಂದ ಮಿತಿ ವ್ಯಾಪ್ತಿಯನ್ನು ಅನುಸರಿಸಿ ಬರೆಯಲಾಗುತ್ತದೆ.

**ಗ್ರಂಥ ಸಂಪಾದನಾಶಾಸ್ತ್ರ:**

ಡಿ.ಎಲ್.ಎನ್. ಅವರ ಕನ್ನಡ ಗ್ರಂಥಸಂಪಾದನೆಯ ನಂತರ ಎಂ.ಎಂ. ಕಲಬುರ್ಗಿಯವರ ಅಭಿನವ ಪ್ರಯತ್ನದಿಂದ ಒಂದು ಸ್ವತಂತ್ರ ಪ್ರಯೋಗವಾಗಿ ಮೂಡಿಬಂದಿರುವ ಈ ಗ್ರಂಥದ ಹಿನ್ನೆಲೆಯಲ್ಲಿ ಅಧ್ಯಯನ - ಅಧ್ಯಾಪನ, ಅನುಭವ - ಅನುಸಂದಾನಗಳ ಚಿಂತೆಯಿದೆ.ನೂರಾರು ಕಾವ್ಯಗಳನ್ನು, ಕಾವ್ಯಗಳ ಅಡಿಟಿಪ್ಪಣಿಗಳನ್ನು, ಹಸ್ತಪ್ರತಿ - ಗ್ರಂಥಗಳನ್ನು ಓದಿದ, ಅಭ್ಯಸಿಸಿದ ಶ್ರದ್ಧಾ ಪೂರ್ಣ ಪರಿಶ್ರಮವಿದೆ. ಈ ಗ್ರಂಥ

| | |
|---|---|
| ಅ) ಇತಿಹಾಸ ಕಾಂಡ | ಈ) ಹಸ್ತಪ್ರತಿ ಕಾಂಡ |
| ಆ) ಲೇಖನ ಕಾಂಡ | ಉ) ಸಂಪಾದನ ಕಾಂಡ |
| ಇ) ಸ್ಖಾಲಿತ್ಯ ಕಾಂಡ | ಊ) ಶೇಷಕಾಂಡ |

ಎಂದು ಆರು ಕಾಂಡಗಳಲ್ಲಿ ವ್ಯಾಪ್ತಿ ಪಡೆದಿದೆ.

[18]"ಗ್ರಂಥರಕ್ಷಣೆ, ಗ್ರಂಥ ಲೇಖನ, ಪಾಠರಕ್ಷಣೆ, ಭಿನ್ನ ಪಾಠ ಸಂಗ್ರಹ ಮತ್ತು ಪಾಠನಿರ್ಣಯ ಇವುಗಳ ತಿಳುವಳಿಕೆ ನಮ್ಮ ನಮ್ಮ ಪ್ರಾಚೀನರಿಗಿರುವುದನ್ನು ಸಾದರವಾಗಿ ಉಲ್ಲೇಖಿಸಲಾಗಿದೆ. ಬಿಟ್ಟು ಹೋಗಿರಬಹುದಾದ ಒಂದೆರಡು ಹೆಸರಿನ ಕೊರತೆಯನ್ನು ಬಿಟ್ಟರೆ, ಕನ್ನಡ ಗ್ರಂಥಸಂಪಾದನೆಯ ಇತಿಹಾಸ ಮೊದಲ ಬಾರಿಗೆ ಸಮಗ್ರವಾಗಿ ಸಮರ್ಪಕವಾಗಿ ಮೂಡಿಬಂದಿದೆ."[18]

[19]"ಕನ್ನಡ ಗ್ರಂಥಸಂಪಾದನೆ" ಯಲ್ಲಿ ಪಾಶ್ಚಾತ್ಯ ಗ್ರಂಥ ಸಂಪಾದನೆಯ ಇತಿಹಾಸ ದೀರ್ಘವಾಗಿ ಉಲ್ಲೇಖಗೊಂಡರೆ, ಭಾರತೀಯ ಮತ್ತು ಕನ್ನಡ ಗ್ರಂಥ ಸಂಪಾದನೆಯ ಇತಿಹಾಸ ಇಲ್ಲಿ ವಿಸ್ತಾರವಾಗಿ ನಿರೂಪಣೆಗೊಂಡಿದೆ.

ಪ್ರಾಚೀನ ಗ್ರಂಥ ಭಂಡಾರಗಳ ವಿವರಣೆ ಹಾಗೂ ಅವುಗಳ ಬಗೆಗೆ ದೊರೆಗಳು ತೋರುತ್ತಿದ್ದ ಆಸಕ್ತಿ ಇಲ್ಲ ಸಾದರವಾಗಿ ಹಾಗೂ ಪ್ರಾಮಾಣಿಕವಾಗಿ ವರ್ಣಿತವಾಗಿದೆ. ಇನ್ನೆಲ್ಲಿಯೂ ಸಿಗದ ಕನ್ನಡ ಗ್ರಂಥ ಸಂಪಾದನೆಯ ಇತಿಹಾಸದಲ್ಲಿ ಇತ್ತೀಚಿನ ವಿವರಗಳೆಲ್ಲ ಸೇರ್ಪಡೆಯಾಗಿವೆ."[19]

ಲೇಖಕ ಕಾಂಡದಲ್ಲಿ ಬರುವ ಲೇಖನ ಸಾಮಗ್ರಿಗಳು ಹಳೆಯದಾದರೂ ಅವುಗಳ ಬಳಕೆಗೆ ಕೆಲವು ಹೊಸ ಆಧಾರಗಳನ್ನು ಕಲಬುರ್ಗಿಯವರು ಕ್ರೋಢೀಕರಿಸಿದ್ದಾರೆ. ಲಿಪಿಕಾರರನ್ನು ನಿಯುಕ್ತಲಿಪಿಕಾರರು, ವೃತ್ತಿಲಿಪಿಕಾರರು, ಹವ್ಯಾಸಿ ಲಿಪಿಕಾರರು ಎಂದು ವರ್ಗೀಕರಿಸಿರುವ ಕಲಬುರ್ಗಿಯವರ ಲೇಖನ ಪರಿಣತಿ, ಸೌಂದರ್ಯ ಪ್ರಜ್ಞೆಗಳನ್ನು ಗುರ್ತಿಸಿರುವುದು ವೈಶಿಷ್ಟತೆಯಿಂದ ಕೂಡಿದೆ.

ಸ್ಖಾಲಿತ್ಯ ಕಾಂಡದಲ್ಲಿ ಬರುವ ಪರಿಭಾಷೆ "ಕನ್ನಡ ಗ್ರಂಥ ಸಂಪಾದನೆಯ" ಪರಿಭಾಷೆಗಿಂತ ಭಿನ್ನವಾಗಿದ್ದು, [20]"ಹಸ್ತಪ್ರತಿಗಳಲ್ಲಿ ಕಂಡುಬರುವ ಅಕ್ಷರ, ಪದ, ಪಾದ ಪದ್ಯ, ಸಂಧಿ, ಹೀಗೆ ಬೇರೆ

ಬೇರೆ ಪ್ರಮಾಣಗಳಲ್ಲಿ ಗೋಚರಿಸುವ ಉದ್ದೇಶಿತ ಮತ್ತು ಅನುದ್ದೇಶಿತ ಪಾಠದೋಷಗಳನ್ನು ಮಾಡಿದವರು ಯಾರು? ಅದಕ್ಕೆ ಕಾರಣ ಏನು? ಎಂಬುದನ್ನು ಬೆರಳಿಟ್ಟು ಹೇಳುವುದು ಕಷ್ಟಸಾಧ್ಯವೆನ್ನುತ್ತಾರೆ. ಸ್ಖಾಲಿತ್ಯಗಳನ್ನು ಲೋಪ, ಆಗಮ, ಆದೇಶ, ಪಲ್ಲವ ಎಂದು ವರ್ಗೀಕರಿಸಿ ವಿವೇಚಿಸಿರುವುದು ಕಲಬುರ್ಗಿಯವರ ಹೊಸ ಆಲೋಚನೆಗೆ ಸಾಕ್ಷಿಯಾಗಿದೆ."[20]

ಹಸ್ತಪ್ರತಿ ಕಾಂಡದಲ್ಲಿ ಹಸ್ತಪ್ರತಿಯ ಬಗೆಗಳು, ಅವುಗಳ ಪರಸ್ಪರ ಸಂಬಂಧ ನಿರ್ಣಯ ಮೊದಲಾದ ಅಂಶಗಳು ಚರ್ಚೆಗೆ ಒಳಪಡುತ್ತವೆ.

ಸಂಪಾದನಾ ಕಾಂಡದಲ್ಲಿ ಸಾಮಗ್ರಿ ಸಂಕಲನ ವಂಶಾವಳಿ ನಿರ್ಣಯ, ಪಾಠ ಸಂಕಲನ, ಪಾಠ ಪರಿಷ್ಕರಣ, ಉನ್ನತ ವಿಮರ್ಶೆ ಎಂದು ಐದು ಹಂತಗಳಲ್ಲಿ ಕಲಬುರ್ಗಿಯವರು ವಿವೇಚಿಸಿದ್ದಾರೆ. [21]"ಗ್ರಂಥಗಳು ಜನಪ್ರಿಯವಾದಷ್ಟು ಪಾಠಾಂತರಗಳು ಅಧಿಕ ಪ್ರಮಾಣದಲ್ಲಿ ದೊರೆಯುತ್ತದೆ. ಉದಾ: ಬಸವೇಶ್ವರ, ಅಕ್ಕಮಹಾದೇವಿಯರ ವಚನಗಳು, ಹರಿಶ್ಚಂದ್ರ ಕಾವ್ಯ, ಕುಮಾರವ್ಯಾಸ ಭಾರತ, ಪುರಂದರ– ಕನಕದಾಸರ ಕೀರ್ತನೆಗಳು ಈ ಸಾಲಿನಲ್ಲಿ ನಿಲ್ಲುತ್ತವೆ."[21] ಈ ಕಾಂಡದ ಕೊನೆಯಲ್ಲಿ ಇವುಗಳ ಬಗೆಗೆ ಕಲಬುರ್ಗಿಯವರು ಸಾಕಷ್ಟು ಸಾಮಗ್ರಿಯನ್ನೊದಗಿಸಿ ಸಂಪಾದಕರಿಗೆ ಉಪಕಾರ ಮಾಡಿದ್ದಾರೆ.

[22]"ಶೇಷಕಾಂಡದಲ್ಲಿ ಸಂಪಾದಕನ ಅರ್ಹತೆ ಮತ್ತು ಸಂಪಾದನೆಯ ಮಹತ್ವ ನಿರೂಪಿತವಾಗಿದೆ. ಸಂಪಾದಕನ ವ್ಯಾಸಂಗ ವ್ಯಾಪ್ತಿ ಇತಿಮಿತಿಯಿಲ್ಲದಷ್ಟು ವೈವಿಧ್ಯಪೂರ್ಣವಾದುದು. ಹಲವರ ಒಡೆತನಕ್ಕೆ ಸಿಕ್ಕಿರುವ ಹಸ್ತಪ್ರತಿಗಳನ್ನು ಸಂಗ್ರಹಿಸುವಲ್ಲಿ ಪ್ರಯತ್ನಶೀಲತೆ, ಹಸ್ತಪ್ರತಿಗಳನ್ನು ಓದುವಲ್ಲಿ ಸಹನಶೀಲತೆ, ಅವುಗಳ ವಂಶಾವಳಿ ನಿರ್ಣಯಿಸುವಲ್ಲಿ ಸಮಾಧಾನ ಪ್ರವೃತ್ತಿ, ಪಾಠ ಸಂಕಲನದಲ್ಲಿ ಪ್ರಾಮಾಣಿಕತೆ, ಪಾಠ ನಿರ್ಣಯಿಸುವಲ್ಲಿ ತೂಕ ಪ್ರಜ್ಞೆ ಇವುಗಳನ್ನು ಕಲಬುರ್ಗಿಯವರು ಸಂಪಾದಕನಿಗಿರಬೇಕಾದ ಅರ್ಹತೆಗಳೆಂದು ತಿಳಿಸಿದ್ದಾರೆ."[22]

[23]"ಕಲಬುರ್ಗಿಯವರು ಕನ್ನಡ ಗ್ರಂಥ ಸಂಪಾದನಾಶಾಸ್ತ್ರವನ್ನು ಬೆಳೆಸುವುದು ಮಾತ್ರವಲ್ಲದೆ ಅದಕ್ಕೆ ನಿದರ್ಶನವಾಗಿ ಕನ್ನಡ ಕೃತಿಗಳನ್ನು ಶಾಸ್ತ್ರೀಯವಾಗಿ ಸಂಪಾದಿಸಿ ಕೊಟ್ಟಿದ್ದಾರೆ. ಸಂಪಾದನೆಯನ್ನು ಕುರಿತು ಕಲಬುರ್ಗಿಯವರ ಮಾತುಗಳನ್ನು ಗಮನಿಸುವುದ ಸೂಕ್ತ ಹಸ್ತಪ್ರತಿಗಳನ್ನು ಹೆಚ್ಚು ಸಂಖ್ಯೆಯಲ್ಲಿ ಸಂಗ್ರಹಿಸಿದಷ್ಟು ಸಾಹಿತ್ಯ ಸಂಪಾದನೆ ಹೆಚ್ಚು ಶುದ್ಧವಾಗುತ್ತಿದ್ದರೆ ವಚನಸಾಹಿತ್ಯ ಸಂಪಾದನೆ ಹೆಚ್ಚು ಅಶುದ್ಧವಾಗುತ್ತದೆ."[23]

ಕಲಬುರ್ಗಿಯವರ ಈ ಗ್ರಂಥಸಂಪಾದನಾಶಾಸ್ತ್ರ ಶಾಸ್ತ್ರೀಯ ಸಾಹಿತ್ಯಕ್ಕೆ ಅತ್ಯಮೂಲ್ಯ ಮತ್ತು ಉಜ್ವಲವಾದ ಕೊಡುಗೆಯನ್ನು ನೀಡಿದೆ ಎಂದು ದೇ. ಜವರೆಗೌಡರು ಪ್ರಶಂಸಿಸಿ ಬರೆದಿದ್ದಾರೆ.

**ಸಂಶೋಧನ ಶಾಸ್ತ್ರ:**

[24]"ಇಂದು ಸ್ನಾತಕೋತ್ತರ ಕನ್ನಡ ಪಠ್ಯಕ್ರಮದಲ್ಲಿ 'ಸಂಶೋಧನ ಶಾಸ್ತ್ರ' ಕುರಿತಾಗಿ ಅಧ್ಯಯನವೂ ಒಂದಾಗಿದೆ. ಹೀಗಾಗಿ, ಸಂಶೋಧನೆ, ಅದರ ವಿಧಿ-ವಿಧಾನ, ಸ್ವರೂಪ ಕುರಿತಾಗಿ ಕೆಲವು ಪುಸ್ತಕಗಳು ಪ್ರಕಟವಾಗಿವೆ. ಆದರೆ ಕಲಬುರ್ಗಿಯವರ 'ಕನ್ನಡ ಸಂಶೋಧನ ಶಾಸ್ತ್ರ' ಸೈದ್ಧಾಂತಿಕ ಪರಿಕಲ್ಪನೆಯಿಂದ, ಕ್ರಮಬದ್ಧ ಅಧ್ಯಯನದಿಂದ ಅವೆಲ್ಲವುಗಳಿಗಿಂತ ಭಿನ್ನವಾಗಿ ಅಂತರ್‌ಶಿಸ್ತನ್ನು ಮೈಗೂಡಿಸಿಕೊಂಡಿವೆ." [24]

ಕಲಬುರ್ಗಿಯವರ ಕನ್ನಡ ಸಂಶೋಧನಾಶಾಸ್ತ್ರದಲ್ಲಿ ಸಂಶೋಧನೆ- ಸಂಶೋಧಕ, ಆಕರಗಳು, ಸಂಶೋಧನ:ಕ್ರಿಯೆ-ಪ್ರಕಾರ ಪ್ರಬಂಧ, ಪೂರಕ ವಿಚಾರಗಳು, ಕನ್ನಡ ಸಂಶೋಧನೆ ಎಂದು ಆರು ವಿಭಾಗಗಳಾಗಿ ವಿಂಗಡಿಸಿದ್ದಾರೆ.

[25]" 'ಸಂಶೋಧನೆ - ಸಂಶೋಧಕ' ಭಾಗದಲ್ಲಿ ಸಂಶೋಧನೆಯ ಅರ್ಥ ವ್ಯಾಪ್ತಿ, ಸಂಶೋಧಕನ ಅರ್ಹತೆಗಳನ್ನು ಚರ್ಚೆಗೆ ಒಳಪಡಿಸಿದ್ದಾರೆ. ಇನ್‌ವೆನ್‌ಶನ್, ಡಿಸ್ಕವರಿ, ರೀಸರ್ಚ್ ಪದಗಳ ನಿರ್ದಿಷ್ಟ ಅರ್ಥ, ಪರಸ್ಪರ ಸಂಬಂಧ - ವ್ಯತ್ಯಾಸ, ಆವಿಷ್ಕಾರ- ಅನ್ವೇಷಣಾತ್ಮಕ ಸಂಶೋಧನೆಗಳ ಬಗೆಗೆ ರೂಪಾತ್ಮಕ (FACT), ಗುಣಾತ್ಮಕ (TRUTH) ಸ್ವರೂಪಗಳ ಬಗೆಗೆ ತಿಳಿಯಪಡಿಸಿದ್ದಾರೆ." [25]

ಕುತೂಹಲ, ಪ್ರಾಮಾಣಿಕತೆ, ಧೈರ್ಯ, ವ್ಯುತ್ಪತ್ತಿ, ಪ್ರತಿಭೆ ಮತ್ತು ಕ್ರಿಯಾಶೀಲತೆ ಇವು ಸಂಶೋಧಕನ ಅರ್ಹತೆಗಳೆಂದು ಇವು ಪೂರ್ಣ ಪ್ರಮಾಣದಲ್ಲಿ, ಸ್ಪರ್ಧಾತ್ಮಕ ರೀತಿಯಲ್ಲಿ ಜಾಗೃತವಾಗಿರಬೇಕೆಂದು, ಯಾವುದೊಂದು ಕೊರತೆಯಾದರೂ ಸಂಶೋಧನಾ ಕ್ರಿಯೆ ಪೂರ್ಣಗೊಳ್ಳುವುದಿಲ್ಲವೆಂದು ಗುರ್ತಿಸಿ ಹೇಳಿದ್ದಾರೆ.

ಕಲಬುರ್ಗಿಯವರು ಹೇಳುವ ಮಾತನ್ನು ಇಲ್ಲಿ ಗಮನಿಸಿದ್ದಾದರೆ, [26]"ಸಂಶೋಧನೆಯ ಕ್ರಮ (Method) ವೂ ಸಂಶೋಧಕನಿಗೆ ರಕ್ತಗತವಾಗುತ್ತದೆ. ಯಾವುದೇ ಸಮಸ್ಯೆ ಕಣ್ಣಿಗೆ ಬಿದ್ದರೆ ಸಾಕು ಅದನ್ನು ಪ್ರವೇಶಿಸುವ ವಿಧಾನ, ಕಾರ್ಯ-ಕಾರಣ ಸಂಬಂಧಗಳನ್ನು ಬೆಸೆಯುತ್ತ ಭಾಷೆಯಲ್ಲಿ ಅಭಿವ್ಯಕ್ತಿಗೊಳಿಸುವ ರೀತಿ ಅವನಿಗೆ ಕರಗತವಾಗುತ್ತದೆ. ಅಂದರೆ ನಿರಂತರವಾಗಿ ತೊಡಗಿಕೊಳ್ಳುವುದರಿಂದ ಅವರ ವ್ಯಕ್ತಿತ್ವಕ್ಕೆ "ಸಂಶೋಧನೆಯ ಶಿಸ್ತು" ಪ್ರಾಪ್ತವಾಗುತ್ತದೆ. ಅವನು ಒಬ್ಬ 'Methodist' ಆಗಿ ರೂಪುಗೊಳ್ಳುತ್ತಾನೆ." [26]

**ಆಕರಗಳು:**

[27]"ಈ ವಿಭಾಗವು ಆಕರಗಳ ಸ್ವರೂಪ, ಆಕರಗಳ ಪ್ರಕಾರ, ಆಕರದ ನೆಲೆಗಳು ಮತ್ತು ಆಕರ ಶೋಧ ಕ್ರಿಯೆಗಳನ್ನೊಳಗೊಂಡಿದೆ. ಲೌಕಿಕ ಆರಕಗಳಿಗಿಂತ ಧಾರ್ಮಿಕ ಆಕಾರಗಳು ಆಧ್ಯಾತ್ಮಿಕ ಒಲವನ್ನು ಉಳಿಸಿಕೊಂಡಿವೆ ಎನ್ನುವುದಕ್ಕೆ ಕಲಬುರ್ಗಿಯವರು ಕೊಡುವ 'ಭುವನೈಕ

ರಾಮಾಭ್ಯುದಯ' ದ ಉದಾಹರಣೆ ಮತ್ತು ಕೆಳದಿ ಅರಸರ ನಾಟ್ಯ ಗೃಹ ಗಮನಸೆಳೆಯುತ್ತದೆ. ಅವರು ಸಂಶೋಧನೆಗೆ ವಸ್ತು, ಭಾಷೆ, ಕ್ರಿಯೆ ಜ್ಞಾನ ಮತ್ತು ಮೌಖಿಕ ಸಾಮಗ್ರಿಗಳು ಆಕರವಾಗುವುದನ್ನು ಸ್ವಾರಸ್ಯಕರ ಉದಾಹರಣೆಗಳಿಂದ ಆಕರ್ಷಕವಾಗಿ ಬಿಂಬಿಸುತ್ತಾರೆ." [27]

ನಮ್ಮ ಸಾಹಿತ್ಯ ಚರಿತ್ರೆಯ ಮೊದಲ ಬರವಣಿಗೆಯಾದ ಜೈನರ ರಚನೆಗಳಲ್ಲಿ ಪುರಾಣಗಳು, ಪುರಾಣೀಕೃತ ಇತಿಹಾಸಗಳೂ ಬೆಳೆದು ಆಕರಗಳ ಪ್ರಾಮಾಣಿಕ ಸಂದೇಹಕ್ಕೆ ಗುರಿಯಾಯಿತು. ಇಂಥ ಪುರಾಣ-ಪವಾಡ-ಐತಿಹ್ಯ- ವದಂತೀಕರಣ ಕಾರಣವಾಗಿ ಪ್ರಾಮಾಣಿಕ ಆಕರಗಳ ಆಯ್ಕೆಯಲ್ಲಿ ಸಂಶೋಧಕ ಎಚ್ಚರವಹಿಸಬೇಕೆಂಬುದನ್ನು ಇಲ್ಲಿ ಕಲಬುರ್ಗಿಯವರು ಸರಿಯಾಗಿ ಹೇಳಿದ್ದಾರೆ. 'ಸಂಶೋಧಕ: ಕ್ರಿಯೆ-ಪ್ರಕಾರ' ಭಾಗವು ಸಂಶೋಧನಾ ಶಾಸ್ತ್ರದ ಅಂತರಂಗದಂತಿದೆ.

'ಪ್ರಬಂಧ' ವಿಭಾಗವು ಸಂಪ್ರಬಂಧ - ಮಹಾಪ್ರಬಂಧದ ಸ್ವರೂಪವನ್ನು ವಿವರಿಸುತ್ತದೆ. ಮಹಾಪ್ರಬಂಧದ ಕಟ್ಟಡಕ್ಕೆ ಪರಿವಿಡಿ, ಪ್ರಸ್ತಾವನೆ, ಪ್ರಕರಣ, ಉಪಪ್ರಕರಣ, ವಿಭಜನೆ, ಸಂಯೋಜನೆ, ಅಗತ್ಯ ಛಾಯಾಚಿತ್ರ, ಅಡಿಟಿಪ್ಪಣಿ, ಸಂಕೇತ, ಸಂಕ್ಷೇಪ, ಅನುಬಂಧ ಇವೆಲ್ಲ ಇರಲೇಬೇಕೆಂಬುದು ಅವರ ನುಡಿ. ಪ್ರಬಂಧ ಎನ್ನುವುದು ವಿಷಯ ದೃಷ್ಟಿಯಿಂದ ಪರಿಪೂರ್ಣವಾಗಿ, ವಿನ್ಯಾಸ ದೃಷ್ಟಿಯಿಂದ ಕಲಾತ್ಮಕವಾಗಿ ಸಂಯೋಜಿಸಬೇಕು ಎನ್ನುವುದು ಕಲಬುರ್ಗಿಯವರ ಅಭಿಪ್ರಾಯ.

'ಪೂರಕ ವಿಚಾರಗಳು' ಈ ವಿಭಾಗದಲ್ಲಿ ಸಂಶೋಧನೆಯ ಭಾಷೆ, ವೈಯಕ್ತಿಕ- ಜಂಟಿ - ಸಾಂಸ್ಥಿಕ ಸಂಶೋಧನೆ, ಸಂಶೋಧನೆಯ ಸಹಾಯ, ಸಂಶೋಧನೆಯ ಅವಶ್ಯಕತೆ ಕುರಿತಾದ ಮಾಹಿತಿಗಳನ್ನು ಕಲಬುರ್ಗಿಯವರು ನೀಡುತ್ತಾರೆ.

ಕೊನೆಯದಾದ 'ಕನ್ನಡ ಸಂಶೋಧನ' ವಿಭಾಗದಲ್ಲಿ ಕನ್ನಡ ಸಂಶೋಧನೆಯ ಆಕಾರಶೋಧ, ಆಕರಗಳ ರೂಪನಿಷ್ಟಶೋಧ, ಆಕರಗಳ ಗುಣನಿಷ್ಟ ಶೋಧದ ಮೂಲಕ ನಡೆದು ಬಂದ ದಾರಿಯನ್ನು ತಿಳಿಸುತ್ತಾರೆ.

ಕಲಬುರ್ಗಿಯವರ 'ಕನ್ನಡ ಸಂಶೋಧನಶಾಸ್ತ್ರ' ಅಗತ್ಯ ಆಕರ ಸಾಮಗ್ರಿ, ವ್ಯವಸ್ಥಿತ ವರ್ಗೀಕರಣ, ಸೂತ್ರಬದ್ಧ ವಾಕ್ಯ, ಹೃದ್ಯಶೈಲಿ, ಶಾಸ್ತ್ರ ಶಿಸ್ತುಗಳಿಂದಾಗಿ ಕನ್ನಡಮುಖಿ ಸಂಶೋಧನೆಯ ಪೂರ್ಣ ಪ್ರಮಾಣದ ಶಾಸ್ತ್ರ ಕೃತಿಯಾಗಿದೆ.

**ಹಸ್ತಪ್ರತಿ ಶಾಸ್ತ್ರ:**

ಕಲಬುರ್ಗಿಯವರ ಹಸ್ತಪ್ರತಿ ಶಾಸ್ತ್ರ ಶಾಸ್ತ್ರ ರೂಪ ಪೂರ್ಣ ಪ್ರಮಾಣದ ಗ್ರಂಥವೆಂದೇ ಹೇಳಬೇಕು. ಈ ಕೃತಿಯು ಹಸ್ತಪ್ರತಿಯ ಹುಟ್ಟಿನಿಂದ ಹಿಡಿದು, ಅದು ಹಸ್ತಪ್ರತಿ ಭಂಡಾರದಲ್ಲಿ ವಿದ್ವಾಂಸರಿಗೆ ಉಪಯುಕ್ತವಾಗುವವರೆಗಿನ ಎಲ್ಲ ನೆಲೆಗಳ ಅಧ್ಯಯನ. ಅಂದರೆ ಹಸ್ತಪ್ರತಿಗಳ ಉತ್ಪಾದನೆ, ಪ್ರಸರಣ, ಸಂಗ್ರಹಣ, ವ್ಯವಸ್ಥಾಪನ ಮತ್ತು ಪ್ರಯೋಜನಗಳ ಅಧ್ಯಯನ ಇಲ್ಲಿದೆ.

ಒಟ್ಟಾರೆಯಾಗಿ ಕಲಬುರ್ಗಿಯವರ 'ಶಾಸ್ತ್ರ ಸಂಶೋಧನೆ' ಗಮನಿಸಿ ಹೇಳುವುದಾದರೆ ಅವರ ಸಂಶೋಧನೆಯ ವ್ಯಾಪ್ತಿ ಮತ್ತು ವೈವಿಧ್ಯತೆ ನಮ್ಮನ್ನು ಬೆರಗುಗೊಳಿಸುತ್ತದೆ.

"ಹಸ್ತಪ್ರತಿ ಶಾಸ್ತ್ರ: ಅದರ ವಿವಿಧ ಮುಖಗಳು" ಮತ್ತು "ಹಸ್ತಪ್ರತಿ ಕ್ಷೇತ್ರ ಕಾರ್ಯ: ವಿಧಾನ ಸಾಧನೆ" ಎಂಬೆರಡು ಲೇಖನಗಳನ್ನು ಪರಿಚಯಿಸಿ ಡಾ: ಎಂ.ಎಂ. ಕಲಬುರ್ಗಿಯವರು ಹಸ್ತಪ್ರತಿಯ 'ಸಂಯೋಜನ ಮುಖ' ಮತ್ತು 'ಪ್ರಯೋಜನ ಮುಖ' ಕುರಿತ ವಿವೇಚಿಸುವ ಮೂಲಕ ಹಸ್ತಪ್ರತಿ ನಿರ್ಮಾಣದಂತಹ ಹಾಸು-ಬೀಸುಗಳನ್ನು ವಿವರಿಸಿದ್ದಾರೆ. ಅವರ ಹಸ್ತಪ್ರತಿ ಶಾಸ್ತ್ರವು ಹಸ್ತಪ್ರತಿಯ ಉಗಮ-ವಿಕಾಸ, ಹಸ್ತಪ್ರತಿಯ ಲೇಖನ ಸಾಮಗ್ರಿ-ಲಿಪಿಕಾರ, ಹಸ್ತಪ್ರತಿ ಭಾಷೆ, ಲಿಪಿ, ಚಿತ್ರ, ಹಸ್ತಪ್ರತಿಯ ಅಕ್ಷರ ಸ್ಖಾಲಿತ್ಯದ ಕಾರಣ, ಸ್ವರೂಪ, ಮುಂತಾದವುಗಳನ್ನಲ್ಲದೆ ಹಸ್ತಪ್ರತಿಯ ಸಂರಕ್ಷಣೆ, ಸದುಪಯೋಗ, ಸೂಚೀಕರಣ ಮುಂತಾದ ವಿಷಯಗಳನ್ನು ಚರ್ಚೆಗೆ ಒಳಪಡಿಸುತ್ತಾರೆ. ಈ ಮೂಲಕವಾಗಿ ಹಸ್ತಪ್ರತಿ ಶಾಸ್ತ್ರದ ಅತ್ಯಂತ ಮಹತ್ವದ ಘಟ್ಟಗಳ ಸಂಕೀರ್ಣತೆ ನಮಗೆ ಅನುಭವವಾಗುವಂತೆ ಕಲಬುರ್ಗಿಯವರು ನೀಡುತ್ತಾರೆ.

**ಜನಪದ ಮಾರ್ಗ:**

ಡಾ: ಎಂ.ಎಂ. ಕಲಬುರ್ಗಿಯವರು ಕರ್ನಾಟಕದ ಪ್ರಮುಖ ಜಾನಪದ ಸಂಶೋಧಕರಲ್ಲಿ ಒಬ್ಬರು ಎಂಬುದಲರಲಿ ಎರಡು ಮಾತಿಲ್ಲ. ಜಾನಪದವನ್ನು ದೇಶಿಯ ಹಿನ್ನೆಲೆಯಲ್ಲಿ ಸಂಶೋಧನೆಗೈದ ಎಂ.ಎಂ. ಕಲಬುರ್ಗಿ ಅವರ ಎರಡು ಪುಸ್ತಕಗಳು ನಮ್ಮ ಗಮನ ಸೆಳೆಯುತ್ತವೆ.

1. ಉತ್ತರ ಕರ್ನಾಟಕದ ಜನಪದ ಪದ್ಯ ಸಾಹಿತ್ಯ - 1978
2. ಜಾನಪದ ಮಾರ್ಗ - 1995

ಮೊದಲ ಪುಸ್ತಕದ ಬರವಣಿಗೆಯಲ್ಲಿ ಉತ್ತರ ಕರ್ನಾಟಕದಲ್ಲಿ ಪ್ರಚಲಿತದಲ್ಲಿರುವ ಜನಪದ ಪದ್ಯ ಸಾಹಿತ್ಯವನ್ನು ಒಂದು ವಿಭಾಗೀಯ ಚೌಕಟ್ಟಿಗೆ ಒಳಪಡಿಸಿದ್ದಾರೆ. ಗಂಡಸರ ಹಾಡುಗಳ 27 ನಮೂನೆಗಳನ್ನು, ಹೆಂಗಸರ ಹಾಡುಗಳ 44 ನಮೂನೆಗಳನ್ನು, ಮಕ್ಕಳ ಹಾಡುಗಳ 12 ನಮೂನೆಗಳನ್ನು ಪರಿಚಯಿಸಿದ್ದಾರೆ.

ಜನಪದ ಮಾರ್ಗದಲ್ಲಿ ಡಾ:ಎಂ.ಎಂ. ಕಲಬುರ್ಗಿಯವರು ವೈವಿಧ್ಯಮಯವಾದ 30 ಲೇಖನಗಳನ್ನು ಸಂಗ್ರಹಿಸಿದ್ದಾರೆ. ಅವರು ಸಂಶೋಧನೆಯ ಸಂಬಂಧದಲ್ಲಿ ಜಾನಪದ ಸಾಮಗ್ರಿಯ ಮಹತ್ವವನ್ನು ಹೀಗೆ ಪ್ರತಿಪಾದಿಸುತ್ತಾರೆ.

1. ಜಾನಪದ ಸಾಮಗ್ರಿಯ ಮಹತ್ವ
2. ಜನಪದ ಸಾಹಿತ್ಯ - ಶಿಷ್ಟ ಸಾಹಿತ್ಯದ ತೌಲನಿಕ ಚರ್ಚೆ
3. ವಿಭಾಗೀಕರಣ
4. ಸಂಪಾದನಾ ಕ್ರಮ

[28]"ಜನಪದ (Folklore) ವನ್ನು ರಿಚರ್ಡ್ ಎಂ. ಡಾರ್ಸನ್, ಆರ್.ಎಸ್. ಬಾಗ್ಸ್, ಡಾ: ಹಾ.ಮಾ.ನಾಯಕ ಮೊದಲಾದವರು ಹಲವು ರೀತಿಗಳಲ್ಲಿ ವರ್ಗೀಕರಿಸುತ್ತಾರೆ. ಇವುಗಳಗಿಂತ ಭಿನ್ನವಾಗಿ ಜಾನಪದವನ್ನು ಡಾ: ಎಂ.ಎಂ. ಕಲಬುರ್ಗಿಯವರು ವರ್ಗೀಕರಿಸಿರುವುದು ಆಕರ್ಷಣೀಯ. 'ಜನಪದ ವಾಙ್ಮಯವೆಂಬುದು' 'Oral Folklore ಆಗಿದೆ. ಇದರ ಶಾಖೆಯಾದ 'ಜಾನಪದ ಸಾಹಿತ್ಯ' ವನ್ನು 'Oral art of Folklore' ಎಂದು ಸರಳವಾಗಿ ಸೂತ್ರಗೊಳಸಿ, ಅದರ ಹಿನ್ನೆಲೆಯಲ್ಲಿ ಜಾನಪದ ಸಾಹಿತ್ಯದ ಲಕ್ಷಣಗಳನ್ನು ವಿವರಿಸಿದ್ದಾರೆ." [28]

ಕರ್ನಾಟಕ ಭಾರತಿಯ ಸಂಪುಟ 9-2 ನೆಯ ಸಂಚಿಕೆಯಲ್ಲಿ "ಸಿರಗುಪ್ಪಿ ಸದಾಶಿವಯ್ಯನ ಪಾರಿಜಾತ" ಹೆಸರಿನಲ್ಲಿ ಪ್ರಕಟವಾಗಿದ್ದು ಅನಂತರ ಅದರ ಹಿಂದಿನ ಮುಂದಿನ ಪುಟಗಳನ್ನು ಕಳೆದುಕೊಂಡ "ಶ್ರೀ ಕೃಷ್ಣ ಪಾರಿಜಾತವು" ಹೆಸರಿನ ಮುದ್ರಿತ ಹಸ್ತಪ್ರತಿಯನ್ನು ಶ್ರೀ ಆರ್.ಎನ್. ಸೂಜಿ ಅವರಿಂದ ಪಡೆದು ಎಂ.ಎಂ. ಕಲಬುರ್ಗಿಯವರು ಆ ಕೃತಿಗೆ ಸಂಬಂಧಿಸಿದ ಉಲ್ಲೇಖಗಳನ್ನು ನೀಡುತ್ತಾರೆ.

ಶಿಷ್ಟ ಸಾಹಿತ್ಯದ ಬಗೆಗೆ ವಿವರಿಸುತ್ತ [29]"ಈ ಸಾಹಿತ್ಯವು ಸೃಜನಶೀಲತೆಗೆ ಒಂದು ಹೊಸ ಚಾಲನೆಯನ್ನು ಕೊಡುವ ಶಕ್ತಿ ಜನಪದ ಸಾಹಿತ್ಯಕ್ಕಿದೆ. ಅದನ್ನು ನಿರಂತರವಾಗಿ ಬದುಕಿಸುವ ಸಂಜೀವಿನಿ, ಸಹೃದಯನ ಹೃದಯ ಕವಾಟವನ್ನು ತೆರೆಸುವ ಸಾಧನವಾಗಿ ಯೋಗ್ಯ ಆಹಾರವಾಗಿಸಿ, ಅವನ್ನು ಬದುಕಿಸುವ ಮುಖ್ಯ ಶಕ್ತಿ ಇರುವುದೇ ಜನಪದ ಸಾಹಿತ್ಯದಲ್ಲಿ"[29] ಎನ್ನುವ ಕಲಬುರ್ಗಿಯವರ ಮಾತು ಗಮನಾರ್ಹ.

'ಉತ್ತರ ಕರ್ನಾಟಕದ ಜಾನಪದ ಗದ್ಯ ಸಾಹಿತ್ಯ' ಎಂಬ ಲೇಖನ, 'ಉತ್ತರ ಕರ್ನಾಟಕದ ಪದ್ಯ ಸಾಹಿತ್ಯ' ಎಂಬ ಎರಡು ವಿಭಾಗೀ ಕ್ರಮಕ್ಕೆ ಸಂಬಂಧಿಸಿದ ಸಾಹಿತ್ಯ ರೂಪ ಕಲಬುರ್ಗಿಯವರ ಸಂಶೋಧನ ಜಾನಪದ ಸಾಹಿತ್ಯಕ್ಕೆ ಸಂಬಂಧಿಸಿದ್ದು.

ಅವರು ಉತ್ತರ ಕರ್ನಾಟಕದ ಜಾನಪದ ಗದ್ಯ ಸಾಹಿತ್ಯದಲ್ಲಿ ಮುಖ್ಯವಾಗಿ ಎರಡು ಪ್ರಕಾರಗಳನ್ನು ಗುರ್ತಿಸುತ್ತಾರೆ.

1. ಹಿರಿಯ ಪ್ರಕಾರ – ಕಥೆ ಬಯಲಾಟ
2. ಕಿರಿಯ ಪ್ರಕಾರ-ಪಡೆನುಡಿ, ಗಾದೆ, ಉಪಮೆ, ಒಗಟು, ಲಾಲಿ, ಮಕ್ಕಳಾಟ.

ಉತ್ತರ ಕರ್ನಾಟಕದ ಪದ್ಯ ಸಾಹಿತ್ಯ ಕೃತಿಯಲ್ಲಿ ಮೇಲಿನ ಕೆಲವನ್ನು ಹಾಡುಗಳ ಗುಂಪಿಗೆ ಸೇರಿಸಿದ್ದಾರೆ.

'ಉತ್ತರ ಕರ್ನಾಟಕದ ಜನಪದ ಸಾಹಿತ್ಯ' ಕೃತಿಯಲ್ಲಿ ಪದ್ಯ ಸಾಹಿತ್ಯದ ವರ್ಗೀಕರಣವನ್ನು ಮಾಡಿಕೊಳ್ಳಲು ಪ್ರಯತ್ನಿಸಿದ್ದಾರೆ. ಗಂಡಸರ ಹಾಡು, ಹೆಂಗಸರ ಹಾಡು ಮತ್ತು ಮಕ್ಕಳ ಹಾಡು ಎಂದೂ ಉಪಜೀವನದ ಹಾಡು, ಉತ್ಸವದ ಹಾಡು, ಉತ್ಸಾಹದ ಹಾಡು ಎಂದು ವಿಭಾಗಿಸುವ

ಮೂಲಕ ಕಲಬುರ್ಗಿಯವರು ಜನಪದ ಸಾಹಿತ್ಯದ ಗದ್ಯ ಮತ್ತು ಪದ್ಯ ಪ್ರಕಾರಗಳನ್ನು ವ್ಯಾಪಕವಾಗಿ ವಿಭಗಿಸುವ ಪ್ರಯತ್ನ ಮಾಡಿದವರಲ್ಲಿ ಮೊದಲಿಗರಾಗಿ ಕಾಣುತ್ತಾರೆ.

"ಜನಪದ ಸಾಹಿತ್ಯ ಸಂಪಾದನೆಯಲ್ಲಿ ಪ್ರದೇಶ, ಸಮಾಜ, ಕಾಲ, ಸಂದರ್ಭ, ನಿವೇದಕ ವ್ಯಕ್ತಿ ಎಂಬ ಐದು ಅಂಶಗಳ ತಿಳುವಳಿಕೆ ಸಂಪಾದಕನಿಗೆ ಅವಶ್ಯವಾಗಿದೆ" ಎಂಬ ಡಾ: ಕಲಬುರ್ಗಿಯವರ ಮಾತು ಸರಿಯಾದುದೆ. ತಾವು ಒಬ್ಬ ಸಮರ್ಥ ಸಂಪಾದಕರಾಗಿ, ಗ್ರಂಥಸಂಪಾದನಾಶಾಸ್ತ್ರ ಬರೆದವರಾಗಿ ಅವರಾಡುವ ಅನೇಕ ಮಾತುಗಳು ಗಮನಾರ್ಹವಾಗಿದೆ.

[30]"ಕಲಬುರ್ಗಿಯವರ ಪ್ರಕಾರ ಜಾನಪದ ಸಾಹಿತ್ಯವನ್ನು ಸಂಪಾದಿಸುವುದೆಂದರೆ ಅರ್ಥ ಶುದ್ಧವಾದ ಪಾಠವನ್ನು ನಿರ್ಣಯಿಸುವುದೇ ಹೊರತು ಶಿಷ್ಟಪದ ಸಾಹಿತ್ಯ ಸಂಪಾದನೆಯಂತೆ ಮೂಲ ಪಾಠವನ್ನು ನಿರ್ಣಯಿಸುವುದಲ್ಲ. ಜಾನಪದ ಸಾಹಿತ್ಯಕ್ಕೆ 'ಅಧಿಕೃತ ಪಾಠವೇ ಇರಲಾರದು-ಇರಬಾರದು' "[30] ಎಂಬಂತಹ ಅವರ ನಿರ್ಣಯ ಒಪ್ಪುವಂತದ್ದು.

ಕಲಬುರ್ಗಿಯವರು ಕನ್ನಡ ಜಾನಪದವನ್ನು ದೃಷ್ಟಿಯಲ್ಲಿಟ್ಟುಕೊಂಡು ಅನೇಕ ಶೋಧನೆ ಮಾಡಿದ್ದಾರೆ. ಅವರ ಆಲೋಚನೆ, ಕಾಳಜಿ ಜಾನಪದ ಆಸಕ್ತರಲ್ಲಿ ಉತ್ತಮ ಫಲಿತಾಂಶ ಮೂಡಿಸುತ್ತದೆ. ಅವರ ಮಾರ್ಗ 2 ರಲ್ಲಿ ಜಾನಪದ ಮಾರ್ಗದ ಬಗೆಗೆ ಅನೇಕ ಲೇಖನಗಳನ್ನು ಮಂಡಿಸಿದ್ದಾರೆ.

**ಸಾಹಿತ್ಯ ಮಾರ್ಗ:**

[31]"ಕನ್ನಡ ಸಂಶೋಧಕರಲ್ಲಿ ಅದ್ವಿತೀಯರೆನಿಸಿರುವ ಬಹುಮುಖ ಪ್ರತಿಭೆ ಮತ್ತು ಪಾಂಡಿತ್ಯಗಳ ಡಾ: ಎಂ.ಎಂ. ಕಲಬುರ್ಗಿ ಅವರು ಕವಿರಾಜ ಮಾರ್ಗ ಪರಿಸರದ ಕನ್ನಡ ಸಾಹಿತ್ಯದಿಂದ ಈಚಿನ ಮಾರ್ಗ ಸಂಪುಟಗಳವರೆಗೆ ಬೆಳೆದ ರೀತಿ ಬೆರಗುಗೊಳಿಸುವಂಥದು. ಶಾಸನ, ಜಾನಪದ, ಗ್ರಂಥಸಂಪಾದನೆ, ಛಂದಸ್ಸು, ವ್ಯಾಕರಣ, ನಾಮ ವಿಜ್ಞಾನ, ಹೀಗೆ ಏನೆಲ್ಲೆ ಕ್ಷೇತ್ರಗಳಲ್ಲಿ ತಲಸ್ಪರ್ಶಿಯಾಗಿ ಹರಿಯುವ ಅವರ ವಿದ್ವತ್ತು, ಸಾಹಿತ್ಯ ಮಾರ್ಗದಲ್ಲಿ ಗುರುತರವಾದುದು. ದೇಶೀ ಒಲವಿನ ಅವರ ಬರಹಗಳು, ಸಂಸ್ಕೃತಿ ಶೋಧವೇ ಗುರಿಯಾದ ಅವರ ವಿಮರ್ಶಾ ಒಳನೋಟಗಳು ಚರಿತ್ರೆಯ ವ್ಯಾಪ್ತಿಯಲ್ಲಿ ಕಾಣಿಸಿಕೊಳ್ಳುವ ಸಾಹಿತ್ಯ ಪರಂಪರ ಸಿದ್ಧಾಂತಗಳು ನಮ್ಮನ್ನು ಸೆಳೆಯುತ್ತವೆ." [31]

ಕಲಬುರ್ಗಿಯವರು ವೈಚಾರಿಕ ನೆಲೆಗಟ್ಟಿನಿಂದ ಸಾಹಿತ್ಯ ಸಂಸ್ಕೃತಿಗಳನ್ನು ನೋಡುತ್ತಾರೆ. ಸಾಹಿತ್ಯಕ್ಕೆ ಸಂಬಂಧಿಸಿದಂತೆ ಅವರ ಸಾಧನೆ ಜೀವಂತವಾಗಿ ಹರಿದಿದೆ. ಚಲನಶೀಲತೆ (ಜಂಗಮ) ಯೊಂದೇ ಸಾಹಿತ್ಯವನ್ನು ಮೌಲಿಕವಾಗಿಡಲು ಸಾಧ್ಯ. ನಡೆ-ನುಡಿ ಒಂದಾಗದ ಬರಹವೆಲ್ಲಾ 'ರಚನಾ' ಸಾಹಿತ್ಯವೆನಿಸಿ ಗೌಣವಾಗುತ್ತದೆ. ಪಂಪ, ಹರಿಹರನೊಳಗೊಂಡು ಮೊದಲಾದವರ ಬಗೆಗೆ ಸಾಹಿತ್ಯದ ವ್ಯಾಖ್ಯಾನ ಮಾಡುವಾಗಲೆಲ್ಲ ಕಲಬುರ್ಗಿಯವರು ಬಹುಶಿಸ್ತೀಯ ಅಧ್ಯಯನದ

ಪರಿಣಾಮಗಳನ್ನು ಮನಗಾಣಿಸುತ್ತಾರೆ. "ಒಂದು ಜನಾಂಗದ ಮನಸ್ಸು, ಹಲವು ಮಾಧ್ಯಮಗಳ ಮೂಲಕ ತನ್ನ ಬಂಧನವನ್ನು ಬಿಡಿಸಿಕೊಳ್ಳುತ್ತ ಸಾಗಿ ಬಂದಿರುತ್ತದೆ. ಇವುಗಳಲ್ಲಿ ಪ್ರಮುಖವಾದುದು ಸಾಹಿತ್ಯ ಮಾಧ್ಯಮ". ಕನ್ನಡ ಜಂಗಮ ಸೃಷ್ಟಿಸಿದ ಸಾಹಿತ್ಯಕ್ಕೆ ಸುಮಾರು ಒಂದುವರೆ ಸಾವಿರ ವರ್ಷಗಳ ಇತಿಹಾಸವಿದೆ ಎಂದು ಮನಗಾಣಿಸಿದ್ದಾರೆ.

ಪಂಪ ಸಾಹಿತ್ಯದ ಬಗೆಗೆ ಹೇಳುತ್ತ, ಈ ಸಾಹಿತ್ಯವು 'ಲೌಕಿಕ-ಧಾರ್ಮಿಕ', 'ವಸ್ತುತ-ವರ್ಣಕ', 'ದೇಶಿ-ಮಾರ್ಗ' ಗಳ ಸಮನ್ವಯ ಸೃಷ್ಟಿಯಾಗಿರುವಂತೆ ಆತನ ಜೀವನವೂ ಬ್ರಾಹ್ಮಣ-ಜೈನ', 'ಕರ್ನಾಟಕ-ಆಂಧ್ರ' ಸಂಸ್ಕೃತಿಗಳ ಸಮನ್ವಯ ಸೃಷ್ಟಿಯಾಗಿದೆ. ಹೀಗೆ ಕಲಬುರ್ಗಿಯವರು ಪಂಪನ ಪೂರ್ವಜರು ಆಂಧ್ರ ಪರಿಸರದಿಂದ ಕರ್ನಾಟಕಕ್ಕೆ ಬಂದಂತೆ, ಈತ ಕರ್ನಾಟಕದಿಂದ ಆಂಧ್ರಕ್ಕೆ ಹೋಗಿರುವುದಾಗಿ ತಿಳಸಿದ್ದಾರೆ. ಈತನ ಜೀವನ ಅಣ್ಣಿಗೆರೆಯಿಂದ ಪ್ರಾರಂಭವಾಗಿ, ಬೋಧನದಲ್ಲಿ ನೆಲೆ ಪಡೆದು, ಧರ್ಮಪುರದಲ್ಲಿ ವಿರಾಮಗೊಳ್ಳುವುದನ್ನು ಹಂತಹಂತವಾಗಿ ತಿಳಸುತ್ತಾರೆ. 'ಶಿಷ್ಟ ಸಾಹಿತ್ಯದ' ಒಂದು ಮಾತಿಗೆ ಜನಪದ ನಂಬಿಕೆಯನ್ನು 'ಅಂತರ್‌ಶಿಸ್ತಾಗಿ' ಬಳಸಿದ್ದಾರೆ. ಇದಕ್ಕೆ ಉದಾಹರಣೆಯಾಗಿ 'ಭಕ್ತಿಯ ಮರುಳ' ಲೇಖನದಲ್ಲಿ 'ಬಸವಣ್ಣನ ಭಕ್ತಿಪರವಶತೆಯ ಮಾತುಗಳನ್ನು' ಮತ್ತು ಗೊಗ್ಗಯ್ಯನ ಕುಣಿತದ ಶೈಲಿಯನ್ನು ವಿವರಿಸುವುದನ್ನು ಕಂಡಲ್ಲಿ ಕಲಬುರ್ಗಿಯವರು ಜನಪದಕ್ಕೆ ಶಿಷ್ಟ ಪದವನ್ನು ಹೇಗೆ ಪೂರಕ ಸಾಮಗ್ರಿಯಾಗಿ ತಂದಿದ್ದಾರೆ ಎಂಬುದು ತಿಳಯುತ್ತದೆ.

ಕಲಬುರ್ಗಿಯವರು 'ಪದನಿಷ್ಪತ್ತಿ', 'ನಾಮ ವಿಮೋಚನೆ'ಗಳ ಬಗೆಗೆ ಮಾರ್ಗದಲ್ಲಿ ಹೇಳದ್ದಾರೆ. ಅಷ್ಟೇ ಅಲ್ಲದೆ, ಅವರ ಸಾಹಿತ್ಯ ರೂಪಗಳ ಸ್ಪಷ್ಟತೆಯೂ ಅಖಂಡನೀಯ. ಇದಕ್ಕೆ ನಿದರ್ಶನವಾಗಿ 'ಶರಣರ ಸೂಳ್ನುಡಿ' ಇದರಲ್ಲಿ ಸೂಳ್ನುಡಿಯು – 'ಸುರುಳ' = ['ಪ್ರತಿಜ್ಞೆ ಮಾಡು'] ನುಡಿ ಎಂದು ಪಂಪಾದಿಗಳ ಕೃತಿ ಚಂಪೂ ಅಲ್ಲ, 'ಪ್ರಬಂಧ' ಎಂಬ ಸಾಹಿತ್ಯ ಪ್ರಕಾರ ಎಮಬುದಾಗಿ ತಿಳಸುತ್ತಾರೆ.

ವಚನ ಸಾಹಿತ್ಯದ ಬಗೆಗೆ ಹೇಳುವುದಾದರೆ ಕಲಬುರ್ಗಿಯವರು ವಚನಗಳನ್ನು ಹೇಗೆ ಬಿಚ್ಚುವುದು, ಅದರ ಹುಟ್ಟಿನ ನೆಲೆ, ಗುರಿ, ಧ್ವನಿ ಏನೆಂಬುದನ್ನು ತಿಳಯಬೇಕಾದರೆ ಅವರ ಕೃತಿಗಳಾದ 'ಕನ್ಯೆಯ ಸ್ನೇಹದಂತಿತ್ತು', 'ಕಡಬಡ್ಡಿಯ ಕೊಡಲಾಗದು', 'ನುಡಿದರೆ ಲಿಂಗ ಮೆಚ್ಚಿ ಅಹುದಹುದೆನ್ನಬೇಕು' ಹೀಗೆ ಮೊದಲಾದ ವಚನಗಳನ್ನು ಗಮನಿಸಬಹುದು.

ಕನ್ನಡ ಸಾಹಿತ್ಯವು ಭಾಷಾಂತರ, ರೂಪಾಂತರ, ಸ್ವತಂತ್ರ ಎಂಬ ಮೂರು ಅವಸ್ಥೆಗಳನ್ನು ಅನುಭವಿಸಿದನ್ನು ಗಮನಕ್ಕೆ ತಂದಿದ್ದಾರೆ. ನಮ್ಮ ಸಾಹಿತ್ಯದಲ್ಲಿ ಸ್ವತಂತ್ರಯುಗ ಅಂದರೆ 'ಕನ್ನಡ ಯುಗ' ವನ್ನು ತೆರೆದವರು ಬಸವಣ್ಣ ಮೊದಲಾದ ಶರಣರು ಹಾಗೂ ಹರಿಹರ ಮುಂತಾದ ಕವಿಗಳು ಎಂಬ ಕಲಬುರ್ಗಿಯವರ ಮಾತು ನೂರಕ್ಕೆ ನೂರು ಸತ್ಯ.

ಕನ್ನಡ ಸಾಹಿತ್ಯದಲ್ಲಿ ಕಲಬುರ್ಗಿಯವರಿಗೆ ಪ್ರಗತಿಪರ ಸಾಹಿತ್ಯದಲ್ಲಿ ಹೆಚ್ಚು ಒಲವು. 'ಹರಿಹರನ ಸಾಹಿತ್ಯದಲ್ಲಿ ಹೋರಾಟದ ಧ್ವನಿಗಳು', 'ಪೆರ್ಮಾಡಿರಾಯ ಮತ್ತು ಶಿವಶರಣರ ಆಂದೋಲನ' ಮುಂತಾದ ಲೇಖನಗಳನ್ನು ಗಮನಿಸಿದ್ದಾದರೆ ಪ್ರತಿಗಾಮಿ ಶಕ್ತಿಗಳೊಂದಿಗೆ ಪ್ರಗತಿಪರ ಚಳುವಳಿಗಳು ಕಾಲಕಾಲಕ್ಕೆ ನಡೆಸುತ್ತಿದ್ದ ಸಂಘರ್ಷಗಳನ್ನು ಅಂದಂದಿನ ಸಾಹಿತ್ಯದಲ್ಲಿ ಗಮನಿಸಿರುವುದು ತಿಳಿಯುತ್ತದೆ.

ಕನ್ನಡ ಸಾಹಿತ್ಯ ಚರಿತ್ರೆಗೆ ಸಂಬಂಧಿಸಿದ ಯುಗ ಕಲ್ಪನೆ ಉಳಿದ ವಿದ್ವಾಂಸರಿಗಿಂತ ಕಲಬುರ್ಗಿಯವರ ಯುಗಕಲ್ಪನೆ ಭಿನ್ನತೆಯನ್ನು ಪಡೆದು ವಿದ್ವಾಂಸರ ಗಮನ ಸೆಳೆಯುತ್ತದೆ.

ಸಾಹಿತ್ಯ ಚರಿತ್ರೆಯನ್ನು ಅಖಂಡ ವ್ಯಾಪ್ತಿಯಲ್ಲಿ ವಿವರಿಸುವುದು, ಆ ಮೂಲಕ ಸಾಹಿತ್ಯ ಚರಿತ್ರೆಯನ್ನು ಅಧಿಕೃತಗೊಳಿಸುವುದು ಸಾಹಸದ ಕೆಲಸ. ಕಲಬುರ್ಗಿಯವರು ತಮ್ಮ ಆಳವಾದ ವಿದ್ವತ್ತು, ಪರಿಶ್ರಮಗಳಿಂದ ಈ ಸಾಧನೆಯನ್ನು ಮೆರೆದಿದ್ದಾರೆ.

**ವಿಮರ್ಶಾ ಮಾರ್ಗ:**

ಬಹುಶಿಸ್ತೀಯ ಅಧ್ಯಯನದ ಮೂಲಕ ಸಮಗ್ರ ಸಂಶೋಧಕರಾಗಿರುವ ಕಲಬುರ್ಗಿಯವರು ವಿಮರ್ಶೆಯಲ್ಲಿಯೂ ದಿಟ್ಟ ಹೆಜ್ಜೆ ಇಟ್ಟು ಇತರರಿಗೆ ಮಾದರಿ ಯಾಗಿದ್ದಾರೆ. ಅವರ ಪ್ರಕಾರ 'ಸಂಶೋಧನೆ ಮತ್ತು ವಿಮರ್ಶೆ' ವಾಸ್ತವವಾಗಿ ಬೇರೆ ಬೇರೆಯಲ್ಲ ಎಂದು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಇವುಗಳಲ್ಲಿ ಒಂದು 'ರೂಪನಿಷ್ಠ', ಇನ್ನೊಂದು 'ಗುಣನಿಷ್ಠ', ಒಂದು 'ವಿಶ್ಲೇಷಣಮುಖಿ', ಇನ್ನೊಂದು 'ವ್ಯಾಖ್ಯಾನಮುಖಿ'. ಶುದ್ಧ ವಿಮರ್ಶೆಯೆನ್ನುವುದು ಹೊಸಗನ್ನಡ ಕೃತಿಗಳಿಗೆ ಅನ್ವಯಿಸುತ್ತದೆ.

ಕಲಬುರ್ಗಿಯವರು ಯಾವ ಸಾಹಿತ್ಯಕ್ಕೆ ಕೈ ಹಾಕಿದರೂ ಅವರ ಸಂಶೋಧನ ದೃಷ್ಟಿ ಇದ್ದೇ ಇರುತ್ತದೆ.

ಆದ್ದರಿಂದ, ಅವರ ಬರಹ ಲೇಖನಗಳ ಬಗೆಗೆ ನಮಗೆ ವಿಮರ್ಶಾ ಎಚ್ಚರ ಇರಬೇಕು. ಕಲಬುರ್ಗಿಯವರ ಕೆಲವು ಲೇಖನಗಳನ್ನು ಗಮನಿಸಿದಾದರೆ ಚಾರಿತ್ರಿಕ ವಿಮರ್ಶೆ ಎದ್ದು ಕಾಣುತ್ತದೆ. ಉದಾ: 'ಪಂಪನ ಪರಿಸರಗಳು', 'ಪಂಪ ಐತಿಹಾಸಿಕ ಧಾರ್ಮಿಕ ಹಿನ್ನೆಲೆ', 'ಹರಿಹರನ ಸಾಹಿತ್ಯದಲ್ಲಿ ಹೋರಾಟದ ಧ್ವನಿಗಳು', 'ಬಸವರಾಜ ದೇವರ ರಗಳೆ' ಮೊದಲಾದ ಲೇಖನ ಕೃತಿಗಳ ಕೃತಿಯ ಕಾಲ, ದೇಶ, ಮೌಲ್ಯಗಳನ್ನು ಎಳೆ – ಎಳೆಯಾಗಿ ವಿವರಿಸುತ್ತಾರೆ.

ಹರಿಹರನ ಬಸವರಾಜದೇವರ ರಗಳೆ, ಚಾಮರಸನ ಪ್ರಭುಲಿಂಗಲೀಲೆ ಕಾವ್ಯಗಳು ಪಂಪನ ಆದಿಪುರಾಣವನ್ನು ಮೀರಿಸುವ ಕೃತಿಗಳು ಎಂಬ ಅಭಿಪ್ರಾಯ ಕಲಬುರ್ಗಿಯವರದು. ಹರಿಹರ, ಚಾಮರಸರು ಧರ್ಮವಾಗಿ ವೀರಶೈವವನ್ನು ಒಳಗಿನಿಂದ ಬಳಸಿದರೆ, ಪಂಪ ತನ್ನ ಧರ್ಮವನ್ನು

ಹೊರಗಿನಿಂದ ಬಳಸಿದ್ದಾನೆಂದು ಹರಿಹರ ಚಾಮರಸರ ಕಾವ್ಯಗಳ ವಿಮರ್ಶೆ ಸಂದರ್ಭದಲ್ಲಿ ಕಲಬುರ್ಗಿಯವರು ತಿಳಿಸಿದ್ದಾರೆ.

ಬಿ.ಎಂ.ಶ್ರೀ. ಅವರ 'ಸಾಹಿತ್ಯ ಚರಿತ್ರೆ ವಿಚಾರಗಳೂ', ವೆಂಕಣ್ಣಯ್ಯನವರ 'ವಿಮರ್ಶೆ – ಸಂಶೋಧನೆ – ಸಂಪಾದನೆ', ಗೋವಿಂದ ಪೈಗಳ 'ಸಂಶೋಧನೆಯ ಪದ್ಧತಿ ಸಾಧನೆ', ಪಾಂಡಿತ್ಯದ ಪಟ್ಟಗಜ ಡಿ.ಎಲ್. ನರಸಿಂಹಾಚಾರ್' ಎಂಬ ಲೇಖನಗಳಲ್ಲಿ ಡಾ: ಕಲಬುರ್ಗಿಯವರ ಬಹುಶ್ರುತ ಪಾಂಡಿತ್ಯ ಆಳವಾದ ಅನುಭವ, ವಿಮರ್ಶಾ ಒಳನೋಟಗಳು ಇನ್ನಿಲ್ಲದಂತೆ ಪ್ರಕಟವಾಗಿದೆ.

ಜೈನ ಸಾಹಿತ್ಯ, ವೀರಶೈವ ಸಾಹಿತ್ಯ, ಬ್ರಾಹ್ಮಣ ಸಾಹಿತ್ಯ ಕುರಿತಂತೆಯೂ ಡಾ: ಕಲಬುರ್ಗಿಯವರ ವಿಮರ್ಶಾತ್ಮಕ ಲೇಖನಗಳನ್ನು ಗಮನಿಸಬಹುದು. ದಾಸ ಸಾಹಿತ್ಯದ ಬಗೆಗೆ ಹೇಳುತ್ತ, ದಾಸ ಸಾಹಿತ್ಯವು ಈವರೆಗೆ ಗಂಭೀರ ವಿಮರ್ಶೆಗೆ ವಸ್ತುವಾಗಿಲ್ಲ ಎಂದು ಅಭಿಪ್ರಾಯಪಡುತ್ತಾರೆ.

ಪಂಪನ ಆಶ್ರಯದಾತ ಅರಿಕೇಸರಿ–ಹರಿಕೇಸರಿ ಎಂಬುದರ ಬಗೆಗೆ ಕಲಬುರ್ಗಿಯವರಿಗೆ ಅನುಮಾನವಿದ್ದಿತು. ಅ > ಹ ಆಧಾರದ ಮೇಲೆ 'ಅರಿಗ' ಮೂಲವಾಗಿದ್ದು, 'ಹರಿಕೇಸಿ' ಎಂಬ ಉಲ್ಲೇಖ ನೀಡಿ, ಅರಿಕೇಸಿಯ ಹೆಸರು ಮೂಲತ: ಅರಿಕೇರಿ ಇರಬಹುದೆಂದು, 'ಅರಿಕೇರಿ' ಇದು ಅರಸು ಪದದ ಅರವಾಗಿ ಅರಕೇಸಿ ಎಂದರೆ 'ರಾಜ್ಯಭಾರ ಮಾಡುವವನು' ಎಂದು ತಿಳಿಸಿ, ಪಂಪನ ಆಶ್ರಯದಾತ 'ಅರಿಕೇಸರಿ' ಎಂದು ಅಭಿಪ್ರಾಯಪಟ್ಟರು.

ಹರಿಹರ, ಹಕ್ಕಬುಕ್ಕ, ಪ್ರೌಢ ದೇವರಾಯ ಮೊದಲಾದ ವ್ಯಕ್ತಿನಾಮ, ಪಟ್ಟಣಶೆಟ್ಟಿ, ಮಂಡಗೆ, ಸೂಳ್ನೂಡಿ, ಮೇಣಬಸದಿ ಮೊದಲಾದ ನಿಷ್ಪತ್ತಿಗಳ ಬಗೆಗೆ ಅವರು ಪುರಕ ಸಾಮಗ್ರಿ ಬಳಸಿಕೊಂಡು ಅವಶೇಷಗಳಿಂದ ಇತಿಹಾಸ ತೆಗೆದು ಸಾರ್ಥಕ ಸೇವೆ ಮಾಡಿದ್ದಾರೆ.

ಶಾಸನ, ಜಾನಪದ, ಶಾಸ್ತ್ರಗಳಿಗೆ ಹೋಲಿಸಿದ್ದಾದರೆ ಸಾಹಿತ್ಯ ಮಾರ್ಗ ಮತ್ತು ವಿಮರ್ಶೆ ಮಾರ್ಗ ಹಿರಿದಾದುದು. ಈ ಮಾರ್ಗಗಳ ಬಗೆಗೆ ಸಮಗ್ರ ಪರಿಚಯ ಮಾಡಲು ಅಸಾಧ್ಯವಾಗಿದೆ. ಲೇಖನದ ಮಿತಿಯಿಂದ ಕಡಿಮೆ ವಿಷಯಗಳನ್ನು ಚರ್ಚಿಸಿರುವುದು ಸೋಜಿಗವೆನಿಸುತ್ತದೆ.

## ಅಡಿಟಿಪ್ಪಣಿಗಳು:

1. ಮಹಾ ಮಾರ್ಗ

   ಪುಟ – 837

2. ಸಾಪ್ತಾಹಿಕ ಪುರವಣಿ

   31 ಡಿಸೆಂಬರ್ 2006

3. ಮಾರ್ಗ

ಸಂಪುಟ 2

ಎಂ.ಎಂ. ಕಲಬುರ್ಗಿ

ಪುಟ – 681

4. ಮಾರ್ಗ

ಸಂಪುಟ 2

ಎಂ.ಎಂ. ಕಲಬುರ್ಗಿ

ಪುಟ : 681 – 682

5. ಮಾರ್ಗ

ಸಂಪುಟ: 2

ಎಂ.ಎಂ. ಕಲಬುರ್ಗಿ

ಪುಟ : 690

6. ಮಾರ್ಗ – 2

ಎಂ.ಎಂ. ಕಲಬುರ್ಗಿ

ಪುಟ : 694

ಕಲಬುರ್ಗಿಯವರ ಮಾತುಗಳು

7. ಮಹಾಮಾರ್ಗ

ಅಭಿನಂದನ ಗ್ರಂಥ

ಲೇಖನ : ಶಾಸನ ಸಂಶೋಧನೆ

ಲೇಖಕ : ಹನುಮಾಕ್ಷಿ ಗೋಗಿ

ಪುಟ – 822

8. ಮಹಾಮಾರ್ಗ

ಲೇಖನ : ಶಾಸನ ಸಂಶೋಧನೆ

ಲೇಖಕ : ಹನುಮಾಕ್ಷಿ ಗೋಗಿ

ಪುಟ : 823

9. ಮಹಾಮಾರ್ಗ

ಶಾಸನ ಸಂಶೋಧನೆ

ಪುಟ : 823

10. ಮಹಾಮಾರ್ಗ

ಶಾಸನ ಸಂಶೋಧನೆ

ಪುಟ : 824

11. ಮಾರ್ಗ

ಸಂಪುಟ : 2. ಎಂ.ಎಂ. ಕಲಬುರ್ಗಿ

ಪುಟ : 167

12. ಶಾಸನ ಮಾರ್ಗ

32ನೇ ಲೇಖನ

ಪುಟ : 168

13. ಶಾಸನ ಮಾರ್ಗ

32ನೇ ಲೇಖನ

ಪುಟ : 168 – 169

14. ಮಾರ್ಗ

ಸಂಪುಟ – 2

ಲೇಖನ : ಶಾಸನಗಳಲ್ಲಿ ಶಿವಶರಣರು

ಪುಟ : 109

15. ಮಹಾ ಮಾರ್ಗ

ಲೇಖನ : ಶಾಸನ ಸಂಪಾದನೆ

ಪುಟ : 828

16. ಮಾರ್ಗ

ಶಾಸನ ಸಂಪಾದನೆ

ಲೇಖಕರು : ಎಸ್. ಕೆ. ಕೊಪ್ಪ

ಪುಟ : 809

17. ಮಹಾಮಾರ್ಗ

ಶಾಸ್ತ್ರ ಸಂಪಾದನೆ

ಪುಟ – 809

18. ಗ್ರಂಥ ಸಂಪಾದನ ಶಾಸ್ತ್ರ

ಎಂ.ಎಂ. ಕಲಬುರ್ಗಿ

ಮುನ್ನುಡಿ

ದೇ. ಜವರೇಗೌಡ

19. ಮಹಾಮಾರ್ಗ

ಲೇ: ಶಾಸ್ತ್ರ ಸಂಪಾದನೆ

ಲೇಖಕ : ಎಸ್.ಕೆ. ಕೊಪ್ಪ

ಪುಟ : 810

20. ಗ್ರಂಥ ಸಂಪಾದನ ಶಾಸ್ತ್ರ

ಎಂ.ಎಂ. ಕಲಬುರ್ಗಿ

ಮುನ್ನುಡಿ

ದೇ. ಜವರೇಗೌಡ

21. ಸಿರಿಸಂಪದ

ಲೇ: ಎಂ.ಎಂ. ಕಲಬುರ್ಗಿ

ಲೇಖಕ: ಬಿವ್ಹಿ. ಶಿರೂರ

ಪುಟ - 497

22. ಮಾರ್ಗ - 2

ಲೇಖಕ: ಚನ್ನಬಸವಣ್ಣ

ಷಟಸ್ಥಲ ವಚನ

ಪುಟ - 271 - 278

23. ಮಹಾಮಾರ್ಗ

ಲೇಖನ: ಶಾಸನ ಸಂಪಾದನೆ

ಲೇಖಕರು : ಎಚ್. ಕೆ. ಕೊಪ್ಪ

ಪುಟ : 811

24. ಸಂಶೋಧನ ಶಾಸ್ತ್ರ

ಎಂ.ಎಂ. ಕಲಬುರ್ಗಿ

ಪುಟ - 3, 4, 5

25. ಸಂಶೋಧನ ಶಾಸ್ತ್ರ

ಎಂ.ಎಂ. ಕಲಬುರ್ಗಿ

ಪುಟ - 16

26. ಮಹಾಮಾರ್ಗ

ಶಾಸ್ತ್ರ ಸಂಪಾದನೆ

ಎಸ್.ಕೆ. ಕೊಪ್ಪ

ಪುಟ - 812

27. ಮಾರ್ಗ-2

ಜಾನಪದ ಸಾಹಿತ್ಯ ಸಂಪಾದನೆ

ಪುಟ - 505

28. ಮಾರ್ಗ -2

ಪುಟ - 836

29. ಮಹಾಮಾರ್ಗ

ಲೇಖನ: ಜಾನಪದ ಸಾಹಿತ್ಯ ಸಂಪಾದನೆ

ಲೇಖಕರು : ವೀರಣ್ಣ ದಂಡೆ

ಪುಟ : 837-838

30. ಮಹಾಮಾರ್ಗ

ಲೇಖನ: ಸಾಹಿತ್ಯ ಸಂಪಾದನೆ

ಲೇಖಕರು : ಬಸವಲಿಂಗ ಸೊಪ್ಪಿಮಠ

ಪುಟ : 797

ಅಧ್ಯಾಯ - 3

# ಎಂ.ಎಂ. ಕಲಬುರ್ಗಿ ಯವರ ದೃಷ್ಟಿಯಲ್ಲಿ ಗ್ರಂಥಸಂಪಾದನೆ ಮತ್ತು ಹಸ್ತಪ್ರತಿಶಾಸ್ತ್ರದ ನಿರ್ಮಾಣ

ಡಾ: ಎಂ.ಎಂ. ಕಲಬುರ್ಗಿಯವರು ಗ್ರಂಥಸಂಪಾದನೆ ಮತ್ತು ಹಸ್ತಪ್ರತಿಗಳ ನಿರ್ಮಾತೃ ಎಂದರೆ ತಪ್ಪಾಗಲಾರದು. ಇವರ ದೃಷ್ಟಿಯಲ್ಲಿ ಗ್ರಂಥಸಂಪಾದನೆ ಹಸ್ತಪ್ರತಿ ಶಾಸ್ತ್ರದ ನಿರ್ಮಾಣದ ಬಗೆಗೆ ಈ ಅಧ್ಯಯನದಲ್ಲಿ ವಿವೇಚಿಸಲಾಗಿದೆ. ಹಸ್ತಪ್ರತಿಗಳು ನಾಡಿನ ಸಾಹಿತ್ಯ- ಸಂಸ್ಕೃತಿಗಳ ಅಧ್ಯಯನಕ್ಕೆ ಇರುವಂತಹ ಮೂಲ ಆಕರಗಳು. ಇವುಗಳ ಅಧ್ಯಯನ ಒಂದು ಶಾಸ್ತ್ರವಾಗಿ ಇಂದು ಪರಿಗಣಿತವಾಗಿದೆ. ಹಸ್ತಪ್ರತಿಗಳನ್ನು ಕುರಿತು ಬಿ.ಕೆ. ಹಿರೇಮಠ, ಬಿ.ಎಸ್. ಸಣ್ಣಯ್ಯ, ಎಚ್. ದೇವಿರಪ್ಪ ಮುಂತಾದವರು ಗ್ರಂಥ ರಚನೆ ಮಾಡಿದರಾದರೂ ಡಾ:ಎಂ.ಎಂ. ಕಲಬುರ್ಗಿಯವರ ಕನ್ನಡ ಹಸ್ತಪ್ರತಿಶಾಸ್ತ್ರ ಎಂಬ ಗ್ರಂಥವು ಪ್ರಥಮ ಬಾರಿಗೆ ಶಾಸ್ತ್ರ ಚೌಕಟ್ಟಿಗೆ ಒಳಪಟ್ಟ ಪ್ರಥಮ ಕೃತಿ ಎನ್ನಬಹುದು. ಗ್ರಂಥಸಂಪಾದನ ಶಾಸ್ತ್ರ, ನಾಮಶಾಸ್ತ್ರ, ಸಂಶೋಧನಾಶಾಸ್ತ್ರ ಆಧುನಿಕವಾಗಿ ಕನ್ನಡಕ್ಕೆ ನೀಡಿದಂತೆ ಈ ಸಾಲಿನಲ್ಲಿ ಗ್ರಂಥಸಂಪಾದನಶಾಸ್ತ್ರ ಮತ್ತು ಹಸ್ತಪ್ರತಿಶಾಸ್ತ್ರಗಳೆರಡು ಇವರ ನಿರ್ಮಾಣ ಗ್ರಂಥಗಳನ್ನು ಇಲ್ಲಿ ವಿವೇಚಿಸಲಾಗುತ್ತದೆ.

1. **ಗ್ರಂಥಸಂಪಾದನೆ, ಹಸ್ತಪ್ರತಿಶಾಸ್ತ್ರಗಳ ಸಂಬಂಧ ಹಸ್ತಪ್ರತಿಗಳಿಂದ ಗ್ರಂಥಗಳ ಉಗಮ:**

"ಗ್ರಂಥಸಂಪಾದನೆಯು ಸ್ವಾಭಾವಿಕವಾಗಿಯೇ ಗ್ರಂಥಗಳಿಗೆ ಸಂಬಂಧಿಸಿದ್ದಾಗಿದೆ. ಪಾಠನಿರ್ಣಯದ ವಿಷಯದಲ್ಲಿ ತೋರುವ ವ್ಯವಸ್ಥಿತವೂ, ಕೌಶಲ್ಯಪೂರ್ಣವೂ ಆದ ವಿವೇಚನೆಯೆಂದು ಇದನ್ನು ಸೂತ್ರಿಸಬಹುದು. ಸಂಶೋಧಕನು ಬಹುಮಟ್ಟಿಗೆ ಬಲ್ಲ ಭಾಷೆಯೊಂದರಲ್ಲಿ ತಿಳಿಯುವಂತೆ ಅಥವಾ ತಿಳಿಯಲು ಸಾಧ್ಯವಿರುವಂತೆ ಅರ್ಥವತ್ತಾಗಿ ರಚಿತವಾಗಿರುವ ಯಾವ ಲೇಖನವನ್ನಾದರೂ ಗ್ರಂಥವೆನ್ನಬಹುದು."[1]

"ಪ್ರಾಚೀನ ಗ್ರಂಥಗಳನ್ನು ಪರಿಷ್ಕರಿಸಿ, ಹಲವು ಹಸ್ತಪ್ರತಿಗಳ ಸಹಾಯದಿಂದ ಶುದ್ಧ ಪಾಠಗಳನ್ನು ನಿರ್ಣಯಿಸುವುದೆ ಗ್ರಂಥಸಂಪಾದನೆ."

ಕಲಬುರ್ಗಿಯವರು ಹಸ್ತಪ್ರತಿಶಾಸ್ತ್ರ (Manuscriptology) ಮತ್ತು ಗ್ರಂಥಸಂಪಾದನಶಾಸ್ತ್ರ (Textual criticism) ಗಳು ಒಂದೇ ಭೂಮಿಕೆಯಲ್ಲಿ ಕವಲೊಡೆದ ಜ್ಞಾನಶಾಖೆಗಳು ಎಂದು ತಿಳಿಸಿದ್ದಾರೆ. ಅವರ ಪ್ರಕಾರ ಕೆಲವು ಅಂಶಗಳನ್ನು ಆಧರಿಸಿ ಈ ಎರಡೂ ಶಾಸ್ತ್ರಗಳು ಸಮಾನವೆಂದು ಹೇಳುತ್ತ ಶಾಸ್ತ್ರರೂಪವನ್ನು ಧರಿಸಿ, ನಿಂತಿರುವ ಗ್ರಂಥಸಂಪಾದನಶಾಸ್ತ್ರ ರೂಪಗೊಳ್ಳಬೇಕಾದ ಹಸ್ತಪ್ರತಿಶಾಸ್ತ್ರಕ್ಕೆ ಸಹಾಯವಾಗಬಹುದು ಎಂದು ತಿಳಿಸಿದ್ದಾರೆ.

ಕೈ ಬರಹದ ಗ್ರಂಥಗಳನ್ನು ಹಸ್ತಪ್ರತಿಗಳೆಂದು ಈ ಸಂಬಂಧದ ಅಧ್ಯಯನವನ್ನು ಹಸ್ತಪ್ರತಿಶಾಸ್ತ್ರ ಎಂದು ಕರೆಯುವುದು ರೂಢಿ. ಹಸ್ತಪ್ರತಿಗಳ ಆಧಾರದಿಂದ ಕವಿಪಾಠವನ್ನು ಕಂಡುಹಿಡಿಯುವ ವಿಧಾನವೇ ಗ್ರಂಥಸಂಪಾದನೆ. ಆದುದರಿಂದ, ಹಸ್ತಪ್ರತಿಗೂ, ಗ್ರಂಥಸಂಪಾದನೆಗೂ ಅವಿನಾಭಾವ ಸಂಬಂಧವಿದೆ. ಹಸ್ತಪ್ರತಿಶಾಸ್ತ್ರ ಇಂದು ಪ್ರತ್ಯೇಕ ಶಾಖೆಯಾಗಿಯೇ ಬೆಳೆಯುತ್ತಿದೆ. ಜ್ಞಾನವೃಕ್ಷದ ಬೇರು ಹಸ್ತಪ್ರತಿಶಾಸ್ತ್ರವಾದರೆ ಗ್ರಂಥಸಂಪಾದನೆಯು ವೃಕ್ಷಕಾಂಡ, ಹಾಗಾಗಿ ಗ್ರಂಥಸಂಪಾದನೆಯು ಹಸ್ತಪ್ರತಿಗಳಿಲ್ಲದೆ ಸಾಧ್ಯವಾಗದು.

ಅನೇಕ ಪ್ರಾಚೀನ ಅರಸರಿಂದ ಪ್ರಜೆಗಳವರೆಗಣ ವಿವಿಧ ಶ್ರೇಣಿಯ ವ್ಯಕ್ತಿಗಳು, ವಿವಿಧ ಉದ್ದೇಶಗಳಿಂದ ಗ್ರಂಥಗಳನ್ನು ಪ್ರತಿ ಮಾಡಿದರು, ಮಾಡಿಸಿದರು. ಇವರು ಕಾರಣವಾಗಿ ಹಸ್ತಪ್ರತಿಗಳು ಈವರೆಗೆ ಸಿಕ್ಕಂತಹ ಹಾಗೂ ಇನ್ನು ಮುಂದೆ ಸಿಗಬಹುದಾದ ಇಪ್ಪತ್ತು ಸಾವಿರ ಕನ್ನಡ ಹಸ್ತಪ್ರತಿಯ ಕಟ್ಟುಗಳು, ಒಂದು ಲಕ್ಷ ಕನ್ನಡ ಕೃತಿಗಳು ಕನ್ನಡಿಗರ ಗ್ರಂಥಸಂಪಾದನೆಗೆ ನಿದರ್ಶನ ಎನಿಸಿರುವುದರ ಬಗೆಗೆ ಕಲಬುರ್ಗಿಯವರು ತಿಳಿಸುತ್ತಾರೆ.

'ದೇವರಾಜ ಯಜ್ವನ್'ನು 'ಯಾಸ್ಕನ' ನಿಘಂಟುವಿಗೆ ಬರೆದ ವ್ಯಾಖ್ಯಾನವನ್ನು ಗಮನಿಸಿದ ಕಲಬುರ್ಗಿಯವರು

> [2]"ಶ್ರೀ ವೆಂಕಟಾಚಾರ್ಯತನಯಸ್ಯ
> ಮಾದವಸ್ಯ ಭಾಷ್ಯಕೃತೌ ನಾಮಾನುಕ್ರಮಣ್ಯಾ
> ಆಖ್ಯಾತಾನುಕ್ರಮಣ್ಯಾ ಸ್ವರಾನುಕ್ರಮಣ್ಯಾ
> ನಿಪಾತಾನುಕ್ರಮಣ್ಯಾ ನಿಬಂಧಾನುಕ್ರಮಣ್ಯಾಸ್ತದೀಯಸ್ಯ
> ಭಾಷ್ಯಸ್ಯ ಚ ಬಹುಶಃ ಪರ್ಯಾಲೋಚನಾತ್
> ಬಹುದೇಶಸಮಾನೀತಾನ್ ಬಹುಕೋಶ ನಿರೀಕ್ಷಣಾಚ್ಚ
> ಪಾಠಃ ಸಂಶೋಧಿತಃ"[2]

ಇದರಿಂದ ವ್ಯಕ್ತವಾಗುವುದೆಂದರೆ – ವೆಂಕಟಾಚಾರ್ಯರ ಮಗ ಮಾದವ ಭಾಷ್ಯ ಬರೆಯುವಾಗ ಬೇರೆ ಬೇರೆ ಹಸ್ತಪ್ರತಿಗಳನ್ನು ಸರಿಯಾಗಿ ಸಮಾಲೋಚಿಸಿ, ಅನೇಕ ಕೋಶಗಳಿಂದ ಪರೀಕ್ಷಿಸಿ, ಶುದ್ಧವಾದ ಪಾಠವನ್ನು ಸಂಶೋಧಿಸಿದನ್ನು, ಇದು ಗ್ರಂಥಸಂಪಾದನೆಗೆ ಹಸ್ತಪ್ರತಿಗಳನ್ನು ಬಳಸಿಕೊಳ್ಳುವ ನಿಯಮ ಎಂಬುದನ್ನು ಕಲಬುರ್ಗಿಯವರುಮನವರಿಕೆ ಮಾಡಿಕೊಟ್ಟಿದ್ದಾರೆ.

[3]"ಕ್ರಿ.ಪೂ. ೩೦೦ರ ಕಾಲದಲ್ಲೇ ಈಚಿನ ಬ್ರಾಹ್ಮೀಲಿಪಿಗೆ ಮೂಲವಾದ ಒಂದು ಲಿಪಿ ಭರತ ಖಂಡದಲ್ಲಿ ಇದ್ದಿತೆಂದು ಹೇಳುತ್ತಾರೆ. ಆದುದರಿಂದ, ಗ್ರಂಥಗಳನ್ನು ಬರೆದಿಡುವ ಕಾರ್ಯ ಆ ಕಾಲದಿಂದ ಆರಂಭವಾಗಿರಬಹುದು. ಬಾಯಿಂದ ಬಾಯಿಗೆ ಸಾಗಿ ಬರುತ್ತಿದ್ದ ಸಾಹಿತ್ಯ ಕಾಲ ಕಳೆದಂತೆ ಗ್ರಂಥಸ್ಥವಾಗಿ ಚಾಕ್ಷುಷ ರೂಪವನ್ನು ಪಡೆಯಲಾರಂಭಿಸಿದ ಮೇಲೆ ಅದರ ಪಾಠಶುದ್ಧಿಯ ಹೊಣೆಗಾರಿಕೆ, ಪಠನಕಾರರ ಕೈಯಿಂದ ಜಾರಿ ಲೇಖಕರ ಅಥವಾ ಲಿಪಿಕಾರರ ಹಸ್ತಗತವಾಯಿತು. ಪಠನ ಕಲೆಯೂ, ಲೇಖನ ಕಲೆಯೂ ಬಹಳ ಕಾಲ ಜೊತೆ ಜೊತೆಯಾಗಿ ಬೆಳೆದುಕೊಂಡು ಬಂದಿರಬಹುದು. ಲೇಖನ ಕಲೆ ಬೆಳೆದಂತೆಲ್ಲ ಪಠನ ಕಲೆ ಹಿಂದೆ ಬಿದ್ದು ಕನಿಷ್ಠ ಪರಿಮಿತಿಗೆ ಇಳಿದಿರಬಹುದು. ಪವಿತ್ರ ಗ್ರಂಥಗಳ ವಿಷಯದಲ್ಲಿ ಮಾತ್ರ ಕ್ರಮಪಾಠಾದಿಗಳ ವ್ಯವಸ್ಥೆ ಹಿಂದಿನಿಂದ ಬಂದದ್ದು. ಮುಂದುವರಿದುಕೊಂಡು ಬಂದ ಹಾಗೆ ಕಾಣುತ್ತದೆ. ಉಳಿದ ಸಾಹಿತ್ಯ ಗ್ರಂಥ ಸ್ವರೂಪವನ್ನು ತಾಳಿ ಹಸ್ತಪ್ರತಿಗಳ ಪರಂಪರೆಗೆ ಕಾರಣವಾಯಿತು." [3]

[4]"ಡಾ:ವಿಲಿಯಂ ಕ್ಯೇರಿ ಬಂಗಾಳದಲ್ಲಿರುವ ಶ್ರೀರಾಮಪುರದ ಮಿಷನರಿ ಯಾಗಿದ್ದನು. ಸುಮಾರು 40 ಭಾಷೆಗಳನ್ನು ಕಲಿತು ಒಂದೊಂದಕ್ಕೂ ವ್ಯಾಕರಣವನ್ನು ಬರೆದಿದ್ದಾನೆ. ಇವರು ರಚಿಸಿದ 'Grammer of the Karnata Language' ಎಂಬುದು 1817 ರಲ್ಲಿ ಶ್ರೀರಾಮಪುರದಲ್ಲಿ ಮುದ್ರಿತವಾಯಿತು. ಆನಂತರ 1820 ರಲ್ಲಿ ಜಾನ್ ಮೆಕೆರಲ್, ಕನ್ನಡ ವ್ಯಾಕರಣವೂ, ರೆ. ರೀವ್ಸ್ ಅವರ ಕನ್ನಡಕೋಶವೂ ಪ್ರಕಟಗೊಂಡವು. ಸುಮಾರು 1920ರ ನಂತರ ಕೆ.ಎಫ್. ಕಿಟ್ಟಲ್ ಅವರು ಶಬ್ಧಮಣಿದರ್ಪಣವನ್ನು ಛಂದೋಂಬುಧಿಯನ್ನು ಹಸ್ತಪ್ರತಿಗಳ ಸಹಾಯದಿಂದ ಸಂಪಾದಿಸಿದರು. ಆನಂತರ ತೊರವೆ ರಾಮಾಯಣ, ಜೈಮುನಿ ಭಾರತ, ಬಸವ ಪುರಾಣ, ಕನ್ನಡ ಭಾರತ ಮುಂತಾದವುಗಳು ಗ್ರಂಥರೂಪಗಳನ್ನು ಪಡೆದವು."[4] ಈ ಮುದ್ರಿತ ಗ್ರಂಥಗಳಿಗೆ ಯಾವುದೋ ಹಸ್ತಪ್ರತಿಗಳ ಅವಲಂಬನವಿದ್ದುದರಿಂದ ಇವುಗಳಿಗೆ ನಾವು ಹಸ್ತಪ್ರತಿಗಳಿಗೆ ಸಲ್ಲಬೇಕಾದ ಬೆಲೆಯನ್ನು ಕೊಡಬಹುದು.

[5]" 'ಕನ್ನಡ ಗ್ರಂಥಗಳ ಶಾಸ್ತ್ರೀಯ ಪರಿಷ್ಕರಣದ ಪ್ರಥಮ ವ್ಯಕ್ತಿ' ಎಂಬ ಕೀರ್ತಿಗೆ ಪಾತ್ರರಾದ ಡಾ. ಕಿಟೆಲ್ 1872 ರಲ್ಲಿ 6 ಹಸ್ತಪ್ರತಿಗಳ ನೆರವಿನಿಂದ ಶಬ್ಧಮಣಿದರ್ಪಣವನ್ನು ಸಂಪಾದಿಸಿದರು. ಆರಂಭದ ಉಪೋದ್ಘಾತದಲ್ಲಿ ಕವಿ-ಕೃತಿ ವಿವೇಚನೆಯನ್ನು ಅಂತ್ಯದ ಪರಿಶಿಷ್ಟದಲ್ಲಿ ಪಾಠಾಂತರಗಳನ್ನು ಕೊಟ್ಟಿರುವರು. 1874 ರಲ್ಲಿ 11 ಹಸ್ತಪ್ರತಿಗಳನ್ನು ಬಳಸಿಕೊಂಡು ನಾಗವರ್ಮನ ಛಂದೋಂಬುದಿಯನ್ನು ಪರಿಷ್ಕರಿಸಿದರು."[5] ಹಸ್ತಪ್ರತಿಗಳ ಸಹಾಯದಿಂದ ಗ್ರಂಥಸಂಪಾದನೆಗೆ ಶ್ರೀಕಾರ ಹಾಕಿದವರು ಮಂಗಳೂರು ಪ್ರದೇಶದ ಪಾದ್ರಿಗಳೆಂದು ಗುರ್ತಿಸುವಲ್ಲಿ 18ನೇ

ಶತಮಾನದಲ್ಲಿ ಹಸ್ತಪ್ರತಿ ಮತ್ತು ಗ್ರಂಥಸಂಪಾದನೆಗಳ ಸಂಬಂಧ ಯಾವ ರೀತಿ ಪ್ರಾರಂಭವಾಯಿತೆಂಬುದನ್ನು ಕಲಬುರ್ಗಿಯವರು ತಿಳಿಸಿದ್ದಾರೆ.

ಪಂಚತಂತ್ರ 1865, ಶಬ್ದಮಣಿದರ್ಪಣ 1868, Bibliotheca Carnatica, ಅಮರಕೋಶ 1873, ಪಂಪರಾಮಾಯಣ 1882, ಕರ್ನಾಟಕ ಭಾಷಾಭೂಷಣ ಶಬ್ದಾನುಶಾಸನ 1860, ಪಂಪ ಭಾರತ – ಈ ಎಲ್ಲಾ ಕೃತಿಗಳನ್ನು ಹಸ್ತಪ್ರತಿಗಳ ಸಹಾಯದಿಂದ ಬಿ.ಎಲ್. ರೈಸ್ ಕನ್ನಡದ ಉತ್ತಮೋತ್ತಮ ಗ್ರಂಥಗಳನ್ನು ಸಂಪಾದಿಸಿದ್ದಾರೆ. ಪ್ರತಿಯೊಬ್ಬ ಗ್ರಂಥಸಂಪಾದಕನು ಹಲವಾರು ಹಸ್ತಪ್ರತಿಗಳನ್ನು ಅಭ್ಯಸಿದಿ, ಅವುಗಳನ್ನೆಲ್ಲ ತಮ್ಮ ಚಿಂತನೆಯ ಚಿತೆಯಲ್ಲಿ ಕಾಸಿ, ಸೋಸಿ, ಪುಸ್ತಕದ ಪಡಿಯಚ್ಚಿನಲ್ಲಿ ಎರಕ ಹೊಯ್ದಿರುತ್ತಾರೆ. ಈ ರೀತಿಯಾಗಿ ಗ್ರಂಥಸಂಪಾದನೆ ಹಸ್ತಪ್ರತಿಗಳ ಮೂಲಕ ಬೆಳೆದುಬಂದಿತು.

ಸಮಾನ ವಿವಿಧ ವರ್ಗದ ಪ್ರಜೆಗಳು, ದಾನ, ಅಧ್ಯಯನ ಮತ್ತು ಅಧ್ಯಾಪನ ಪ್ರಯೋಜನಾರ್ಥ ಗ್ರಂಥಗಳನ್ನು ಬರೆದಿರುವುದಕ್ಕೆ ಹಾಗೂ ಬರೆಸಿರುವುದಕ್ಕೆ ಎಂ.ಎಂ. ಕಲಬುರ್ಗಿಯವರು ಉತ್ತಮ ಉದಾಹರಣೆಗಳನ್ನು ನೀಡಿರುವುದು ಗಮನಿಸುವುದಾದರೆ – "ಜೈನ ಪ್ರಭಾವಕ ಚರಿತೆ" ಯಲ್ಲಿ [6]"ತನ್ನ ವಿನಂತಿಯ ಮೇರೆಗೆ ವ್ಯಾಕರಣ ಬರೆಯಲು ನಿರತನಾದ ಹೇಮಚಂದ್ರನಿಗೆ, ಸಿದ್ಧರಾಜ ಜಯಸಿಂಹನು ಈ ಹಿಂದಣ ಎಂಟು ವ್ಯಾಕರಣಗಳ ಹಸ್ರಪ್ರತಿಗಳನ್ನು ಕಾಶ್ಮೀರದ ಸರಸ್ವತಿ ಭಾಂಡಾರದಿಂದ ತರಿಸಿಕೊಟ್ಟನು ಇವುಗಳ ನೆರವಿನಿಂದ ಹೇಮಚಂದ್ರನು ರಚಿಸಿದ "ಸಿದ್ಧಹೇಮಚಂದ್ರ" ವ್ಯಾಕರಣದ ಹಸ್ತಪ್ರತಿಗಳನ್ನು ಸಿದ್ಧಪಡಿಸಲು, 300 ಜನ ಲಿಪಿಕಾರರನ್ನು, 3 ವರ್ಷಗಳವರೆಗೆ ನಿಯಮಿಸಿದ್ದನು. ಇವರು ಸಿದ್ಧಪಡಿಸಿದ ಹೇರಳ ಹಸ್ತಪ್ರತಿಗಳಲ್ಲಿ ತನ್ನ ರಾಜ್ಯದ ಪ್ರತಿಯೊಂದು ಮತದ ಗ್ರಂಥಾಲಯಕ್ಕೆ ಒಂದೊಂದನ್ನು, ಅನ್ಯ ಗ್ರಂಥಾಲಯಗಳಿಗೆ ಮಿಕ್ಕವುಗಳನ್ನು ಹಂಚಿದನು. ಕಾಶ್ಮೀರದ ಸರಸ್ವತಿ ಭಾಂಡಾರಕ್ಕೆ ಇಪ್ಪತ್ತು ಹಸ್ತಪ್ರತಿಗಳನ್ನು ನೀಡಿದನು. ಸಾಲದುದಕ್ಕೆ ಬಾರತದ ಹೊರಗಣ ಪರ್ಶಿಯಾ, ಸಿಲೋನ, ನೇಪಾಳಗಳಿಗೂ ಈ ಪ್ರತಿಗಳನ್ನು ಕಳಿಸಿದನು."[6] ಈ ರೀತಿಯಾಗಿ ಗ್ರಂಥಾಲಯಗಳಿಗೆ ಕಳುಹಿಸಿದ ಪ್ರತಿಗಳು ಮುಂದೆ ಗ್ರಂಥಸಂಪಾದನೆಗೆ ಸಹಯಕವಾಯಿತು. ಕಲಬುರ್ಗಿಯವರು ಇಂತಹ ಅನೇಕ ಉದಾಹರಣೆಗಳನ್ನು ಗಮನಿಸಿ, ಗ್ರಂಥಸಂಪಾದನೆಗೆ ಹಸ್ತಪ್ರತಿಗಳು ಒಂದೇ ದಾರಿಯಲ್ಲಿ ಕವಲೊಡೆದ ಶಾಖೆಗಳೆಂದು ತೋರಿಸಿಕೊಟ್ಟಿದ್ದಾರೆ. ಗ್ರಂಥಸಂಪಾದನೆಯ ಕಾರ್ಯ ಸುಲಲಿತವಾಗಿ ನಡೆಯಬೇಕಾದರೆ, ಹಸ್ತಪ್ರತಿಗಳಲ್ಲಿ ಯಾವ ರೀತಿ ಸಂಬಂಧ ಹೊಂದಬೇಕೆಂಬುದನ್ನು ಎಂ.ಎಂ.ಕಲಬುರ್ಗಿಯವರು ಸೂಚಿಸಿದ್ದಾರೆ. [7]"ಹಸ್ತಪ್ರತಿಗಳನ್ನು ಸಂಗ್ರಹಿಸುವಲ್ಲಿ ಪ್ರಯತ್ನಶೀಲತೆ, ಅವುಗಳನ್ನು ಓದುವಲ್ಲಿ ಸಹನಶೀಲತೆ, ಅವುಗಳ ವಂಶಾವಳಿ ನಿರ್ಣಯಿಸುವಲ್ಲಿ ಸಮಾಧಾನ

ಪ್ರವೃತ್ತಿ, ಪಾಠಸಂಕಲನದಲ್ಲಿ ಪ್ರಾಮಾಣಿಕತೆ, ಪಾಠ ನಿರ್ಣಯಿಸುವಲ್ಲಿ ತೂಕಪ್ರಜ್ಞೆ ಇರಬೇಕೆಂದು ತಿಳಿಸುತ್ತಾರೆ." [7]

[8]"ಅಂದು ಗ್ರಂಥಸಂಪಾದನೆಯನ್ನು ಅಭ್ಯಾಸ ಮಾಡುವವರಿಗೆ ಡಿ.ಎಲ್. ನರಸಿಂಹಾಚಾರ್ ಅವರ ಗ್ರಂಥಸಂಪಾದನಶಾಸ್ತ್ರವೇ ಆಧಾರವಾಗಿತ್ತು. ಆದರೆ, ಅದು ಇಂಗ್ಲಿಷ್‌ನಿಂದ ಕನ್ನಡಕ್ಕೆ ತಂದ ಸಿದ್ಧಾಂತದಿಂದ ಮಾತ್ರ ಕೂಡಿತ್ತು. ಆ ಕೊರತೆಯನ್ನು ತುಂಬಲು ಕನ್ನಡಕ್ಕಾಗಿಯೇ ಒಂದು ಸಿದ್ಧಾಂತ ರೂಪಿಸಿ ಡಾ. ಎಂ.ಎಂ. ಕಲಬುರ್ಗಿಯವರು 'ಕನ್ನಡ ಗ್ರಂಥಸಂಪಾದನಾಶಾಸ್ತ್ರ' ವನ್ನು ಬರೆದರು." [8] ಈ ಕನ್ನಡ ಗ್ರಂಥಸಂಪಾದನಾಶಾಸ್ತ್ರ ಕೃತಿಯಲ್ಲಿ ತಾವು ರೂಪಿಸಿದ ಸಿದ್ಧಾಂತಗಳನ್ನು ಹಲವು ಉದಾಹರಣೆಗಳ ಮೂಲಕ ವಿವರಿಸಿದ್ದಾರೆ. ಸುಮಾರು 47 ಕೃತಿಗಳ, ನೂರಾರು ಶಾಸನಗಳ ಅತ್ಯುತ್ತಮ ಉದಾಹರಣೆಗಳ ನಿದರ್ಶನ ನೀಡಿದ್ದಾರೆ.

ಒಂದು ಗ್ರಂಥವನ್ನು ಸಂಪಾದಿಸಲು ಹಲವು ಹಸ್ತಪ್ರತಿಗಳನ್ನು ಸಂಗ್ರಹಿಸಬೇಕಾಗುತ್ತದೆ. ಕಲಬುರ್ಗಿಯವರು ಹಸ್ತಪ್ರತಿಗಳನ್ನು (ಅ) ಮೂಲಪ್ರತಿ, (ಆ) ಪಂಪರಾಗತ ಪ್ರತಿ, (ಇ) ಶುದ್ಧ ಸಂತಾನ ಪ್ರತಿ, (ಈ) ಅಶುದ್ಧ ಸಂತಾನ ಪ್ರತಿಗಳೆಂದು ವಿಭಾಗಿಸಿರುವುದು ಗಮನಾರ್ಹ. ಒಂದು ಗ್ರಂಥಸಂಪಾದನೆಗೆ ಈ ಪ್ರತಿಗಳು ಎಷ್ಟು ಪ್ರಮಾಣದ ಸಹಾಯ ಮಾಡುತ್ತವೆ ಎಂಬುದನ್ನು ವಿವರವಾಗಿ ಉದಾಹರಣೆಗಳ ಮೂಲಕ ಕಲಬುರ್ಗಿಯವರು ವಿವೇಚಿಸಿದ್ದಾರೆ.

ಕನ್ನಡದಲ್ಲಿ ಲಭ್ಯವಿರುವ ಪ್ರಾಚೀನ ಹಸ್ತಪ್ರತಿಗಳಲ್ಲಿ ಮೈಸೂರು ವಿಶ್ವವಿದ್ಯಾನಿಲಯದ 'ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ' ಹಸ್ತಪ್ರತಿ ಭಂಡಾರದಲ್ಲಿರುವ 'ನಾಮಲಿಂಗಾನುಶಾಸನ ಟೀಕೆ'ಯ ಹಸ್ತಪ್ರತಿಯೇ ಅತ್ಯಂತ ಪ್ರಾಚೀನ.

**ಹಸ್ತಪ್ರತಿಗಳಿಂದ ಗ್ರಂಥಗಳ ಸಂಗ್ರಹಣ, ಪರಿಷ್ಕರಣ ಕಾರ್ಯ ವಿಧಾನ:**

[9]"ಡಾ: ಎಂ.ಎಂ. ಕಲಬುರ್ಗಿಯವರು ಹಸ್ತಪ್ರತಿಗಳ ಸಹಾಯದಿಂದ ಗ್ರಂಥಗಳ ಸಂಗ್ರಹಣ, ಪರಿಷ್ಕರಣ ಕಾರ್ಯ ವಿಧಾನವನ್ನು ಚರ್ಚಿಸಿರುವುದು ಗಮನಾರ್ಹ. ಆ ಮೂಲಕವಾಗಿ ಗ್ರಂಥಸಂಪಾದನೆ ಮತ್ತು ಹಸ್ತಪ್ರತಿಶಾಸ್ತ್ರದ ನಿರ್ಮಾಣಕ್ಕೆ ತಮ್ಮದೇ ಸಂಶೋಧನೆಯ ವಿವರಣೆಗಳನ್ನು ನೀಡಿದ್ದಾರೆ. ಹಸ್ತಪ್ರತಿಗಳಿಗೆ ಗ್ರಂಥಗಳ ಸಂಗ್ರಹ ಕಾರ್ಯ ಅಸಾಧ್ಯವೆಂದೆ ಹೇಳಬಹುದು. ಭಾರತದ ಇತರ ಪ್ರಂತಗಳಂತೆ ಪಾಶ್ಚಿಮಾತ್ಯರು ಕರ್ನಾಟಕದಲ್ಲಿಯೂ ಹಸ್ತಪ್ರತಿ ಸಂಗ್ರಹ ಮತ್ತು ಗ್ರಂಥ ಪರಿಷ್ಕರಣ ಕಾರ್ಯಗಳನ್ನು ಏಕ ಕಾಲಕ್ಕೆ ನಡೆಸಿಕೊಂಡು ಬಂದರು.

**ಹಸ್ತಪ್ರತಿಗಳ ಸಂಗ್ರಹ ಮತ್ತು ಪರಿಷ್ಕರಣೆ:**

[9]"ಕನ್ನಡ ಹಸ್ತಪ್ರತಿಗಳ ಸಂಗ್ರಹ ಕಾರ್ಯವನ್ನು ಕೈಕೊಂಡ ಪ್ರಥಮ ವ್ಯಕ್ತಿ ಕರ್ನಲ್ ಮೆಕಾಯಿ ಭಾರತದ ಬೇರೆ ಬೇರೆ ಪ್ರಾಂತಗಳಲ್ಲಿ ಬೇರೆ ಬೇರೆ ಹುದ್ದೆಗಳನ್ನು ವಹಿಸಿಕೊಂಡು ದುಡಿದ ಈತನ ಪ್ರಾಚೀನ ವಸ್ತು ಮತ್ತು ಪ್ರಾಚೀನ ಗ್ರಂಥ ಸಂಗ್ರಹ ವೈವಿಧ್ಯಮಯವಾಗಿತ್ತು. 14 ಭಾಷೆ, 16 ಲಿಪಿಗಳಲ್ಲಿ ಬರೆಯಲ್ಪಟ್ಟ ಹಲವಾರು ಗ್ರಂಥ ಮತ್ತು ಶಾಸನಗಳಲ್ಲದೆ ವಿಗ್ರಹ, ನಾಣ್ಯ, ಭೂಪಟಗಳನ್ನೊಳಗೊಂಡ ಈತನ ಸಂಗ್ರಹ ಸಂಪತ್ತು, ೮೦೦ ಗ್ರಂಥಗಳು. 1858 ರಲ್ಲಿ ಗವ್ಹರ್ನಮೆಂಟ್ ಮ್ಯಾನುಸ್ಕ್ರಿಪ್ಟ್ ಲೈಬ್ರರಿಯ ವಶಕ್ಕೆ ಹೋಯಿತು"[9]

ಮದ್ರಾಸ್ ಗವ್ಹರ್ನಮೆಂಟ್ ಮ್ಯಾನುಸ್ಕ್ರಿಪ್ಟ್ ಲೈಬ್ರರಿಯಲ್ಲಿ ಹಸ್ತಪ್ರತಿಗಳ ಗ್ರಂಥಸೂಚಿಗಳ ಬಗೆಗೆ ಹೇಳುತ್ತ ಕಲಬುರ್ಗಿಯವರು ಇಷ್ಟು ಪರಿಪೂರ್ಣ ಗ್ರಂಥಸೂಚಿಗಳನ್ನು ಕರ್ನಾಟಕದ ಯಾವ ಮ್ಯಾನುಸ್ಕ್ರಿಪ್ಟ್ ಲೈಬ್ರರಿಗಳೂ ಮಾಡಿಲ್ಲವೆಂದು ವಿಷಾದದಿಂದ ತಿಳಿಸಿದ್ದಾರೆ. ಮೈಸೂರು ಸೀಮೆಯಲ್ಲಿ ಕನ್ನಡ ಹಸ್ತಪ್ರತಿಗಳ ವ್ಯವಸ್ಥಿತ ಸಂಗ್ರಹ ಕಾರ್ಯಕ್ಕೆ ಮೈಸೂರು ಸರ್ಕಾರ ಪ್ರಾಚ್ಯ ವಿದ್ಯಾ ಸಂಶೋಧನ ಇಲಾಖೆಯ ಪ್ರಥಮ ಡೈರೆಕ್ಟರ್ ಬಿ.ಎಲ್. ರೈಸ್, ಅವರ ಸಾಧನೆಯನ್ನು ಸ್ಮರಿಸಿದ್ದಾರೆ. 1907 ರಲ್ಲಿ ಆ ಸಂಸ್ಥೆಯ ಡೈರೆಕ್ಟರ್‌ರಾದ ಶ್ರೀ ಆರ್. ನರಸಿಂಹಾಚಾರ್ ರವರು 1922ರ ವರೆಗೆ ಅಸಂಖ್ಯಾ ಹಸ್ತಪ್ರತಿಗಳನ್ನು ಸಂಗ್ರಹಿಸಿರುವುದನ್ನು ತಿಳಿಸುತ್ತ ಆ ಸಂಸ್ಥೆಯ ಡೈರೆಕ್ಟರ್‌ಗಳಾದ ಶ್ರೀ ಎಂ ಎಸ್. ಬಸವಲಿಂಗಯ್ಯ, ಶ್ರೀ ಎಚ್.ಆರ್. ರಂಗಸ್ವಾಮಿ ಅಯ್ಯಂಗಾರ್, ಶ್ರೀ ಎಚ್. ದೇವಿರಪ್ಪ ಮೊದಲಾದವರ ಪರಿಶ್ರಮದಿಂದ ಸುಮಾರು ಮೂರು ಸಾವಿರ ಕನ್ನಡ ಹಸ್ತಪ್ರತಿಗಳು ಸಂಗ್ರಹವಾಗಿರುದನ್ನು ತಿಳಿಸುತ್ತಾರೆ.

[10]"ನಿಜಾಮ ಸರ್ಕಾರದ ಹಿಡಿತಲ್ಲಿದ್ದ ಹೈದರಾಬಾದ್ ಕರ್ನಾಟಕದ ಗುಲ್ಬರ್ಗ, ಬೀದರ್ ಮತ್ತು ರಾಯಚೂರು ಜಿಲ್ಲೆಗಳಲ್ಲಿ ಸಂಗ್ರಹಕಾರ್ಯ ಅಲಕ್ಷಿಸಲ್ಪಟ್ಟಿದೆ. ರಾಯಚೂರು ಜಿಲ್ಲೆಯಲ್ಲಿ ದಾಸಸಾಹಿತ್ಯಕ್ಕೆ ಸಂಬಂದಪಟ್ಟ ಹಸ್ತಪ್ರತಿಗಳ ಸಂಗ್ರಹವಿದೆ."[10] ಮೂಡಬಿದರೆಯ ಜೈನಮಠ, ಜೈನ ಭವನ, ಕಾರ್ಕಳದ ಜೈನಮಠ, ಅಲಿಯೂರು ಆದಿನಾಥ ದೇವಾಲಯಗಳಲ್ಲಿ ಸಾವಿರಾರು ಹಸ್ತಪ್ರತಿಗಳ ಸೂಚಿ ಇದೆ ಎಂಬುದನ್ನು, ಬಿಹಾರದ ಆರಾಪಟ್ಟಣದಲ್ಲಿ 1500 ಕನ್ನಡ ಜೈನ ಹಸ್ತಪ್ರತಿಗಳು ದೇವನಾಗರಿ ಲಿಪಿಯಲ್ಲಿರುವುದನ್ನು ಕಲಬುರ್ಗಿಯವರು ತಿಳಿಸಿದ್ದಾರೆ.

[11]"ಮದ್ರಾಸ, ಹಳೆಯ ಮೈಸೂರು, ಮುಂಬೈ, ಕರ್ನಾಟಕ, ಹೈದ್ರಾಬಾದ್ ಕರ್ನಾಟಕ ಮತ್ತು ಕರ್ನಾಟಕದ ಹೊರಗೆ ಹಸ್ತಪ್ರತಿಗಳನ್ನು ಸಂಗ್ರಹಿಸಲಾಗಿದೆ. ಆದರೆ, ಹಸ್ತಪ್ರತಿಗಳು ರಾಷ್ಟ್ರದ ಸಂಪತ್ತು ಎಂದು ಭಾವಿಸಿ, ನಮ್ಮ ರಾಜ್ಯ ಸರಕಾರ ಅವುಗಳನ್ನು ವ್ಯವಸ್ಥಿತವಾಗಿ, ಆಮೂಲಾಗ್ರವಾಗಿ ಸಂಗ್ರಹಿಸಬೇಕಾದ ಕಾರ್ಯ ಇನ್ನು ಉಳಿದಿದೆ. ಈ ಕಾರ್ಯ ಪೂರ್ತಿಯಾದರೆ ಒಟ್ಟು 20,00

ಹಸ್ತಪ್ರತಿಗಳು, ಒಂದೊಂದು ಕಟ್ಟಿನಲ್ಲಿ 5 ಕೃತಿಗಳು ಎಂದು ಹಿಡಿದರೆ - ಒಂದು ಲಕ್ಷ ಗ್ರಂಥಗಳು ಸಿಗಬಹುದು." [11]

## ಹಸ್ತಪ್ರತಿಗಳ ಸಂಗ್ರಹ ವಿಧಾನ:

[12]"ಹಸ್ತಪ್ರತಿಗಳಿಂದ ಗ್ರಂಥಗಳನ್ನು ಸಂಗ್ರಹಿಸಬೇಕಾದಲ್ಲಿ ಪ್ರಾಚೀನ ಕೃತಿಗಳ ಸಂಪಾದನೆಯ ಬಗೆಗೆ ಕಾಳಜಿ ವಹಿಸುವುದು ಮುಖ್ಯ. ಪ್ರಾಚೀನ ಕೃತಿಗಳನ್ನು ಸಂಪಾದಿಸುವಲ್ಲಿ ಸಂಪಾದಕನು ಮೊದಲು ಆ ಕೃತಿಯ ಎಷ್ಟು ಹಸ್ತಪ್ರತಿಗಳು ದೊರೆಯತುವುವೆನ್ನುವುದರ ಮಾಹಿತಿಯನ್ನು ಪಡೆಯಬೇಕಾಗುತ್ತದೆ. ಅನಂತರ ಹೊಸ ಪ್ರತಿಗಳೇನಾದರೂ ದೊರೆಯುವ ಸಂಭವವಿದ್ದಲ್ಲಿ ಅವುಗಳನ್ನು ಪಡೆಯಲು ಪ್ರಯತ್ನಿಸಬೇಕಾಗುತ್ತದೆ. ತಾನು ಆರಿಸಿಕೊಳ್ಳುವ ಕೃತಿಯೇನಾದರೂ ಜನಪ್ರಿಯವಾದ ಗ್ರಂಥವಾದರೆ ಅಮಿತ ಸಂಖ್ಯೆಯಲ್ಲಿಯೇ ಹಸ್ತಪ್ರತಿಗಳು ದೊರೆಯಬಹುದು. ದೇಶ ವಿದೇಶಗಳ ಗ್ರಂಥಭಂಡಾರಗಳ ಪುಸ್ತಕಗಳ ಪಟ್ಟಿಯನ್ನು ನೋಡಿ, ಆದಷ್ಟು ಹೆಚ್ಚು ಸಂಗತಿಗಳನ್ನು ಸಂಗ್ರಹಿಸುವುದು ಅಗತ್ಯ. ಆ ಕೃತಿಯ ಅನುವಾದಗಳು ದೊರೆತರೆ ಅವುಗಳನ್ನು ತಪ್ಪದೆ ಸಂಗ್ರಹಿಸಬೇಕು. ಏಕೆಂದರೆ, ಪಾಠಾಂತರ ನಿರ್ಣಯದಲ್ಲಿ ಅವು ಬಾಹ್ಯ ಪ್ರಮಾಣಗಳಾಗಬಲ್ಲವು." [12]

ಎಂ.ಎಂ. ಕಲಬುರ್ಗಿಯವರು ಹಸ್ತಪ್ರತಿಗಳನ್ನು ಬಳಸಿಕೊಂಡು ಗ್ರಂಥಗಳನ್ನು ಸಂಪಾದಿಸಬೇಕಾದರೆ ಯಾವ ವಿಧಾನವನ್ನು ಅನುಸರಿಸಿದರೆ ಸೂಕ್ತ ಎಂಬುದನ್ನು ಈ ರೀತಿಯಾಗಿ ತಿಳಿಸಿ, ಮಾಹಿತಿ ನೀಡಿದ್ದಾರೆ.

ಅ) ಸಾಮಗ್ರಿ ಸಂಕಲನ

ಆ) ವಂಶಾವಳಿ ನಿರ್ಣಯ

ಇ) ಪಾಠ ಸಂಕಲನ

ಈ) ಪಾಠ ಪರಿಷ್ಕರಣ

ಉ) ಉನ್ನತ ವಿಮರ್ಶೆ

ಎಂಬ ಐದು ಹಂತಗಳನ್ನು ಗ್ರಂಥ ಸಂಪಾದಕ ಅನುಸರಿಸಿದರೆ ಒಂದು ಗ್ರಂಥ ನಿರ್ಮಾಣವಾಗಲು ಸಾಧ್ಯವಿದೆ ಎಂಬ ಮಾರ್ಗವನ್ನು ತೋರಿಸಿಕೊಟ್ಟಿದ್ದಾರೆ.

ಗ್ರಂಥ ಸಂಪಾದಕನು ತಾನು ಸಂಪಾದಿಸುತ್ತಿರುವ ಕೃತಿಗೆ ಸಂಬಂಧಿಸಿದಂತೆ ಅದಕ್ಕೆ ಸಂಬಂಧಪಟ್ಟ ಹಸ್ತಪ್ರತಿಗಳ ಜೊತೆಗೆ ಇತರ ಕೃತಿಗೆ ಸಂಬಂಧಿಸಿದ ಸಾಹಿತ್ಯವನ್ನು ಸಂಗ್ರಹಿಸಬೇಕೆಂಬುದನ್ನು ತಿಳಿಸಿಕೊಟ್ಟಿದ್ದಾರೆ.

[13]"ಹಸ್ತಪ್ರತಿಗಳು ಕನಿಷ್ಠ ಪಕ್ಷ ಒಂದಕ್ಕಿಂತ ಎರಡು, ಎರಡಕ್ಕಿಂತ ಮೂರು ಇದ್ದರೆ ಲೇಸು. ಇವು ಒಂದರ ನಕಲು ಇನ್ನೊಂದಾಗಿರದೆ ಭಿನ್ನ ಕುಟುಂಬಕ್ಕೆ ಸಂಬಂಧಿಸಿರಬೇಕು. ಮೂರಕ್ಕಿಂತ ಹೆಚ್ಚು ಪ್ರತಿಗಳಿದ್ದರೆ ಇನ್ನೂ ಲೇಸು.

ಮಹಾಭಾರತದ ಪರಿಷ್ಕರಣಕ್ಕೆ ಡಾ. ಸುಕ್ತಣಕರ ಅವರು 70 ಹಸ್ತಪ್ರತಿಗಳನ್ನು, ಚೆನ್ನಬಸವಣ್ಣನವರ ವಚನ ಪರಿಷ್ಕರಣಕ್ಕೆ ಡಾ. ಆರ್.ಸಿ. ಹಿರೇಮಠ ಅವರು 80 ಹಸ್ತಪ್ರತಿಗಳನ್ನು ಬಳಸಿದ್ದುದನ್ನು ಇಲ್ಲಿ ನೆನೆಯಬಹುದು." [13]

ಸಾಮಾನ್ಯವಾಗಿ ಹಸ್ತಪ್ರತಿಗಳು ಭಿನ್ನವಾಗಿ ಕಂಡುಬರುತ್ತದೆ. ಇದರಲ್ಲಿ ಅತಿ ಪ್ರಾಚೀನ ಹಸ್ತಪ್ರತಿ ಶುದ್ಧವಾಗಿರುತ್ತದೆ. ಇವುಗಳನ್ನು ಸಂಪಾದಕ ಸಂಗ್ರಹಿಸುವುದು ಮುಖ್ಯ. ಅದು ಪ್ರಾಚೀನವೆ ಅಥವಾ ಅರ್ವಾಚೀನವೆ ಎಂಬುದನ್ನು ಗ್ರಂಥದ ಕೊನೆಯಲ್ಲಿ ಲಿಪಿಕಾರನ ಭಾಷೆ, ಅಕ್ಷರಗಳ ಮೂಲಕ (ಸ್ವರೂಪ) ಅ, ವಿ ಬಳಕೆ, ಪ್ರತಿ ಲಭಿಸಿದ ಸ್ಥಳ, ಲಿಪಿಕಾರ ಸೂಚಿಸಿರುವ ತನ್ನ ಗ್ರಾಮ ಈ ಮಾಹಿತಗಳಿಂದ ತಿಳಿಯಬಹುದು. ಈ ಮೂಲಕವಾಗಿ ಗ್ರಂಥಗಳ ಸಂಪಾದನ ಕಾರ್ಯ ಪರಿಪೂರ್ಣ, ಪರಿಸ್ಪುಟವಾಗಿರುತ್ತದೆ. ಕಲಬುರ್ಗಿಯವರು ಸಂಪಾದಕನಿಗೆ ಹಸ್ತಪ್ರತಿಯ ಒಲವು, ನಿಲುವುಗಳ, ಗುಣ-ದೋಷಗಳ ಸಮಗ್ರ ಅಭ್ಯಾಸ ಇರಬೇಕೆಂದಿದ್ದಾರೆ. ಹಾಗೆ ಹಸ್ತಪ್ರತಿಗಳಲ್ಲಿ ಮಾತ್ರಿಕಾ- ಪುತ್ರಿಕಾ, ಸೋದರ - ಸದಸ್ಯ ಸಂಬಂಧ ನಿರ್ಣಯಿಸಬೇಕೆಂದಿದ್ದಾರೆ. ಅನಂತರ ಪುತ್ರಿಕಾಪುತ್ರಿ, ಸೋದರ ಪ್ರತಿಗಳನ್ನು ಕೈಬಿಟ್ಟು ಕುಟುಂಬದ ಮಾತೃಕ ಪ್ರತಿ ಮತ್ತು ಉರ್ಜಿತವಾಗಿರುವ ಸದಸ್ಯ ಪ್ರತಿಗಳನ್ನು ಮಾತ್ರ ಆಯ್ದುಕೊಳ್ಳುವಂತೆ ಮಾಹಿತಿ ನೀಡಿದ್ದಾರೆ. ಈ ರೀತಿ ಆರಿಸಿಕೊಂಡ ಹಸ್ತಪ್ರತಿಗಳಿಗೆ ಸಂಕೇತ ಕೊಟ್ಟು, ಅವುಗಳಲ್ಲಿ ತೀರ ಉತ್ತಮವಾದುದನ್ನು ಆಧಾರವಾಗಿಟ್ಟುಕೊಂಡು ಮಿಕ್ಕವನ್ನು ಭಿನವನ ಪಾಠಗಳಾಗಿ ಗುರ್ತಿಸಿಕೊಂಡಲ್ಲಿ ಹಸ್ತಪ್ರತಿಗಳಿಮದ ಉತ್ತಮ ಗ್ರಂಥ ನಿರ್ಮಾಣ ಸಾಧ್ಯವಾಗುತ್ತದೆ.

ಡಾ: ಹಳಕಟ್ಟಿ, ಪ್ರೊ: ಬಸವನಾಳ, ಡಾ: ಆರ್.ಸಿ. ಹಿರೇಮಠ ಮೊದಲಾದ ಸಂಪಾದಕ ವಿದ್ವಾಂಸರುಗಳು ತಮಗೆ ದೊರೆತ ಎಲ್ಲ ಪ್ರತಿಗಳನ್ನು ಅಥವಾ ಕುಟುಂಬದ ಪ್ರತಿನಿಧಿ ಪ್ರತಿಗಳನ್ನು ಇಟ್ಟುಕೊಂಡು ಅವುಗಳನ್ನು ಪರಿಷ್ಕರಿಸಿ, ಗ್ರಂಥವಾಗಿ ಪ್ರಕಟಿಸುತ್ತ ಬಂದರು. ಆದರೆ, ಡಾ: ಕಲಬುರ್ಗಿಯವರು ವಿಭಿನ್ನ ಸಂಪ್ರದಾಯದ ಹಸ್ತಪ್ರತಿಗಳಿಂದ ಪಾಠಗಳನಾಯ್ದುಕೊಮಡು ಪರಿಷ್ಕರಣಕ್ಕೆ ತೊಡಗಿದರೆ ನಮ್ಮದೇ ಆದ ಬೇರೊಂದು ವಚನ ಪಾಠವನ್ನು ರೂಪಿಸುವ ಅಪಾಯವಿದೆ ಎಂದು ತಿಳಿದು, ಅವುಗಳ ಸಂಪಾದನೆಗೆ ಭಾಷೆ, ವಿಷಯ, ಶೈಲಿ ದೃಷ್ಟಿಯಿಂದ ಉತ್ತಮವಾದ ಕೇವಲ ಒಂದು ಕಟ್ಟನ್ನು ಆಯ್ದುಕೊಮಡು ಅದನ್ನು ಆಧಾರ ಪ್ರತಿಯೆಂದು ಅದೇ ಕುಟುಂಬದ ಒಂದು ಇಲ್ಲವೆ ಎರಡು ಪ್ರತಿಗಳನ್ನು ಪಾಠಾಂತರ ಗುರುತಿಸಲು ಇಟ್ಟುಕೊಳ್ಳಬೇಕೆಂಬ ಹೊಸ ವಿಧಾನವನ್ನು ತಮ್ಮ ಗ್ರಂಥಸಂಪಾದನೆಯಲ್ಲಿ ಅನುಸರಿಸಿದರೆಂಬುದು ತಿಳಿದಿದ್ದೆ ಆದರೆ

ಕಲಬುರ್ಗಿಯವರು ಗ್ರಂಥಸಂಪಾದಕರಿಗೆ ಉತ್ತಮ ಮಾರ್ಗದರ್ಶಕರಾಗಿದ್ದಾರೆ ಎನ್ನುವುದರಲ್ಲಿ ಎರಡು ಮಾತಿಲ್ಲ.

ಗ್ರಂಥ ಸಂಗ್ರಹಕ್ಕೆ ಪಾಠ ಸಂಕಲನವೆಂಬುದು ಅತಿ ಮುಖ್ಯವಾದ ವಿಷಯ. ಪರಿಷ್ಕರಣ ಕಾರ್ಯಕ್ಕೆ ಆಯ್ದುಕೊಂಡ ಹಸ್ತಪ್ರತಿಗಳು ಅನೇಕ ಭಿನ್ನ ಪಾಠಗಳನ್ನು ಒಳಗೊಂಡಿರುತ್ತದೆ. ಕಲಬುರ್ಗಿಯವರು ಈ ಭಿನ್ನ ಹಸ್ತಪ್ರತಿಗಳಲ್ಲಿನ ಭಿನ್ನ ಪಾಠಗಳನ್ನು ಕಂಡುಹಿಡಿಯುವಲ್ಲಿ 'ಕವಿರಾಜಮಾರ್ಗ'ದ ಒಂದು ಮಣಿಭೂಷನ ವೃತ್ತವನ್ನು ಮಾದರಿಯಾಗಿ ನೀಡಿದ್ದಾರೆ.

| ಹಸ್ತ ಪ್ರತಿ | ಪದ್ಯ | ಪಾಠ | | | | | | | | | | | | | | | ಇತರ ವಿಷಯ |
|---|---|---|---|---|---|---|---|---|---|---|---|---|---|---|---|---|---|
| 110 | 1-121 | ತೂ | ರಿ | ಪಿಂ | ಗಿ | ಸು | ವ | ವೊ | ಲ್ಸ | ಲೆ | ನೆ | ಲ್ಲಿ | ರೆ | ಪಾ | ಳ್ಗ | ಳಂ | |
| 125 | | ತೋ | | | | | | | | | | | | | | | ಪ್ರ.ಕ 44.2 ನೋಡಿ |
| 178 | | | | | | | | | | | | | | ಪೆ ಞ | | | |
| 28 8 | | ತೋ | | | | | | | ಪೊಸ | – | | | | ಪೆ ಞ | | | |

ಈ ರೀತಿಯಾರಿ ಚೌಕಮನೆಗಳ ಹಾಳೆಯನ್ನು ತೆಗೆದುಕೊಂಡು ಕಲಬುರ್ಗಿಯವರು ಪ್ರತಿಗಳ ಒಂದೊಂದು ಅಕ್ಷರ, ಅದರ ಕೆಳಗೆ ಬೇರೆ ಪ್ರತಿಗಳ ಅಕ್ಷರಗಳನ್ನು, ಹಾಳೆಯ ಒಂದು ಮಗ್ಗಲಲ್ಲಿ ಪ್ರತಿಗಳ ಸಂಕೇತ, ನಂಬರ್, ಸಂದಿ-ಪದ್ಯಗಳನ್ನು ಇನ್ನೊಂದು ಮಗ್ಗಲಲ್ಲಿ ಇತರ ವಿಷಯಗಳನ್ನು ಬರೆಯುವಂತೆ ಸೂಚಿಸಿದ್ದಾರೆ. ಇದರಿಂದ ಒಂದು ಉತ್ತಮ ಗ್ರಂಥವನ್ನು ಗ್ರಂಥಸಂಪಾದಕ ಪಡೆಯಲು ಸಾಧ್ಯವಾಗುತ್ತದೆ.

ಗ್ರಂಥಸಂಪಾದಕರು ಶುದ್ಧ ಪಾಠವನ್ನು ಅರಿಯಬೇಕಾದರೆ ಒಂದು ಹಸ್ತಪ್ರತಿಯ ಆಳವಾದ ವ್ಯಾಸಂಗದಿಂದ ಸ್ಖಾಲಿತ್ಯಗಳ ಒಲವು-ನಿಲವುಗಳಂದ ಮನದಟ್ಟು ಮಾಡಿಕೊಳ್ಳಬೇಕು. ಇದಕ್ಕೆ ಕಲಬುರ್ಗಿಯವರು ನೀಡುವ ಉದಾಹರಣೆಗಳನ್ನು ನೋಡಬಹುದು.

[14]"ಪುಲಿಕರ ಪುರಾದೀಶ ಶೋಮೇಸನ್
ನಿಜ ವೇಸಮಂ ತೋಳಲಲ್
ಸನಿವದನೆ ನೀನಾರ ಮಗಳು
ದೂಶಕರ ಮೂದಲಿಸು." [14]

ಇಲ್ಲಿ ಶ, ಷ, ಸ, ಗಳ ಧ್ವನಿ ವ್ಯತ್ಯಾಸ ಜ್ಞಾನವಿಲ್ಲದೆ 'ಸೋಮನಾಥ ಚಾರಿತ್ರಯಕ್ಕೆ' ಬಳಸಿದ 'ಮ' ಪ್ರತಿಕಾರನು ಇವು ಬಂದಲೆಲ್ಲ ತಪ್ಪುತ್ತ ಹೋಗಿರುವನು. ಕಲಬುರ್ಗಿಯವರು [ಸೋಮನಾಥ ಚಾರಿತ್ರಯದ ಆಯ್ದ ಪದ್ಯಗಳ ಉದಾಹರಣೆಯನ್ನು ನೀಡಿರುವರು.] ಇಂತಹ ಲಿಪಿಕಾರರ ಅಥವಾ

ಪ್ರತಿಕಾರರ ಭಾಷಾದೋಷವನ್ನು ಸರಿಪಡಿಸಿಕೊಂಡು, ಸ್ಖಾಲಿತ್ಯಗಳನ್ನು ತಿದ್ದಿ ಗ್ರಂಥ ಸಂಪಾದಕನು ಶುದ್ಧಗೊಳಸಬೇಕೆಂಬುದು ಮನವರಿಕೆಯಾಗುತ್ತದೆ. ಸುಷ್ಠ ಪಾಠಗಳನ್ನು, ಮಹಾಪ್ರಾಣ, ದೀರ್ಘ, ಒತ್ತು, ಕಾಗುಣಿತಗಳನ್ನು ಗುರ್ತಿಸುವ ಮೂಲಕ ಹಸ್ತಪ್ರತಿಗಳನ್ನು ಸೂಕ್ಷವಾಗಿ ವೀಕ್ಷಿಸಿ, ನಿರ್ಣಯಿಸುವ ಬಗೆಗೆ ಕಲಬುರ್ಗಿಯವರು ಈ ಉದಾಹರಣೆಗಳನ್ನು ನೀಡಿದ್ದಾರೆ.

[15]"1. ಪುಣ್ಯ ಪದವಿಯ ಬಯಸಿದಡೆ ಭವಮಾಲೆಯ
ಭರವು ತಪ್ಪದು [ಬವ 128] (ಬ)

2. ಗಾಂಗೇಯನ ಮಾತಂ ಮನದೇಗೊಂಡು
[ಪಂ.ಭಾ. 6-41 ಗ] (ದೆ)

3. ಹೊಲಮೇರೆಯ ಹೊಂದೆ ಹೊಲನ ಬಿಟ್ಟೋಡುವೆ
[ಬ.ವ 447] (ಹೊದ್ದೆ)

4. ಎಲ್ಲಿಹುದು ಋಣಭಯವು ಮನುಜರೊಳಲ್ಲಿಹುದು
ದೇವಾಂಶ [ಕು.ಭಾ.ಉ 3-26] (ಳೆ)" [15]

ಇಲ್ಲಿ ಕಲಬುರ್ಗಿಯವರು "ಬಸವಣ್ಣನ ವಚನಗಳು", "ಪಂಪ ಭಾರತ", "ಕುಮಾರವ್ಯಾಸ ಭಾರತ" ಕೃತಿಗಳಿಂದ ಈ ಉದಾಹರಣೆಗಳನ್ನು ಆಯ್ದುಕೊಂಡಿದ್ದಾರೆ. ಅವರು ಪ್ರತಿಯೊಂದು ಹಸ್ತಪ್ರತಿಗಳಲ್ಲಿನ ಅಕ್ಷರಗಳ ಸಾದೃಶ್ಯತೆಯನ್ನು ಗಮನಿಸಿ, ಗ್ರಂಥಸಂಪಾದನೆಗೆ ಮಾರ್ಗ ಹಾಕಿಕೊಡುವುದರ ಮೂಲಕ ಹಸ್ತಪ್ರತಿಗಳಿಂದ ಗ್ರಂಥಗಳನ್ನು ಯಾವ ರೀತ ಪರಿಷ್ಕರಿಸಬೇಕೆಂಬುದನ್ನು ತಿಳಿಸಿದ್ದಾರೆ.

[16]"ಹಸ್ತಪ್ರತಿಗಳನ್ನು ಸಂಗ್ರಹಿಸಿದ ಬಳಿಕ ಅವುಗಳನ್ನು ಆಮೂಲಾಗ್ರವಾಗಿ, ಅತ್ಯಂತ ಎಚ್ಚರಿಕೆಯಿಂದ ಓದಬೇಕು. ಹಸ್ತಪ್ರತಿಯ ಓದುಗಾರಿಕೆ ಎಲ್ಲರಿಗೂ ದಕ್ಕುವಂಥದ್ದಲ್ಲ. ಪ್ರಾಚೀನ ಕಾವ್ಯಗಳ ಆಳವಾದ ಅಧ್ಯಯನ, ಕನ್ನಡ ಲಿಪಿಜ್ಞಾನ ಇವುಗಳ ಬೆಂಬಲದಿಂದ ಮಾತ್ರ ಸಮರ್ಪಕವಾಗಿ ಓದಲು ಸಾಧ್ಯ. ಮೋಡಿ ಬರಹ ಓದಲು ಅನುಭವಬೇಕು. ಬಿಂದುವಿನ ಬದಲು ದ್ವಿತ್ವಾಕ್ಷರ ಅಥವಾ ಮಹಾಪ್ರಾಣಗಳನ್ನು ಲಿಪಿಕಾರರು ಬರೆಯುವುದುಂಟು. ಅಂಥ ವೇಳೆಯಲ್ಲಿ ಸಂದರ್ಭಾನುಸಾರ ಓದಿಕೊಳ್ಳಬೇಕು. ಸಂಪಾದಕ ಅಸಮರ್ಥನಿದ್ದರೆ ಲಿಪಿಕಾರ ಸ್ಖಾಲಿತ್ಯದ ಜೊತೆಗೆ ಸಂಪಾದಕನ ಸ್ಖಾಲಿತ್ಯವೂ ಸಂಭವಿಸುತ್ತದೆ."[16]

ಎಂ.ಎಂ. ಕಲಬುರ್ಗಿಯವರು ಒಂದು ಗ್ರಂಥಸಂಪಾದನೆಗೆ ಅನೇಕ ಪಾಠಗಳನ್ನು ಆಯ್ದುಕೊಂಡಾಗ ಅದರಲ್ಲಿ ಒಂದು ಪಾಠವನ್ನು ನಿರ್ಣಯಿಸುವಲ್ಲಿ ಇನ್ನೊಂದು ಪಾಠದ ಸಮರ್ಥನೆ, ಸಮ್ಮತಿ ಬೇಕೆಂದಿರುವುದು ಗಮನಿಸಬೇಕಾದರೆ ಅವರು ನೀಡಿರುವ ಬಸವಣ್ಣನವರ ವಚನದ ಉದಾಹರಣೆ ಗಮನಿಸಬೇಕು.

[17]"ನರವಿಂಧ್ಯದೊಳಗೆನ್ನ ಹುಲಗಿಳ [2]ಯ
ಮಾಡಿ ಸಲಹುತ್ತ
ಶಿವ ಶಿವಾಯೆಂದೋದಿಸಯ್ಯಾ
ಭಕ್ತಿಯೆಂಬ ಪಂಜರದೊಳಗಿಕ್ಕಿ ಸಲಹು
ಕೂಡಲಸಂಗಮ ದೇವಾ [1-2 ಹುಲ್ಲಗಣಿ, ಹುಲುಗಿಣಿ]

ಎನಗಿಂತ ಕಿರಿಯರಿಲ್ಲವೆಂಬ ಮನೋಧರ್ಮದ ಬಸವಣ್ಣನವರ ವಚನವಿದು. ಈ ಮನೋಧರ್ಮವನ್ನು ಪ್ರತಿನಿಧಿಸಲು "ನರವಿಂಧ್ಯದೊಳಗೆನ್ನ ಹುಲ್ಲಗೆಣಿ ಮಾಡಿ" ಎಂಬುದು ಯೋಗ್ಯ ಪಾಠ. ಆದರೆ "ಶಿವಾಶಿವಾಯೆಂದೋದಿಸು", "ಭಕ್ತಿಯೆಂಬ ಪಂಜರ" ಎಂಬ ಮಾತುಗಳನ್ನು ನೆನೆದಾಗ, 'ಹುಲಿಗಿಳ' ಎಂಬ ಪಾಠ ಗಿಳಿಯ ರೂಪ ಚಿತ್ರಣ ಬಸವಣ್ಣನವರ ಉದ್ದೇಶ. ಹುಲಿಗಿಳ > ಹುಲುಗಿಣಿ ಹೀಗೆ ಉಭಯ ಸಂಭವ್ಯತೆಗಳಿಂದ ಸಮ್ಮತಿ ಪಡೆದ ಈ ಪಾಠ ಮಾತ್ರ ಸ್ವೀಕಾರ ಯೋಗ್ಯ." [17]

ಗ್ರಂಥಸಂಪಾದಕನಿಗೆ ಭಿನ್ನ ಪಾಠಗಳ ಅಧ್ಯಯನದ ಜೊತೆಗೆ ಒಬ್ಬ ಕವಿಯ ಕಾಲದ ಜನಸಾಮಾನ್ಯರ ನಂಬಿಕೆಗಳ ಪರಿಚಯ ಅಗತ್ಯ. ಸಂಪಾದಕನಿಗೆ ಇದರ ಬಗೆಗೆ ಪರಿಚಯವಿಲ್ಲದಿದ್ದರೆ ಕೆಲವು ವೇಳೆ ಸಂಪಾದಕ ಕಷ್ಟಕ್ಕಿಡಾಗುತ್ತಾನೆ.

[18]"ಕಳಶಜನನಿಂತು ಕೊಲಿಸಿದ
ಖಳನೆ ಗಡಂ ಧರ್ಮನಂದನಂ ಕ್ರೂರದಿನಂ
ಗಳ ಪೆಸರಂ ಮಾಯೆಯಿಸಂ ಮಂ
ಗಳವಾರಂ 'ಕಡ್ಡ' ವಾರ ಮೆಂಬಂತೆ ವಲಂ" [18]

ಇದರಲ್ಲಿ 'ಕಡ್ಡ' ಎಂಬುದಕ್ಕೆ 'ವಡ್ಡ' ಎಂದು ಒಂದು ಪ್ರತಿಯಲ್ಲಿ ಪಾಠವಿದೆ. ಹೆಚ್ಚಿನ ಚರ್ಚೆಗೆ ಇಲ್ಲಿ ಪ್ರವೇಶಿಸದೆ 'ವಡ್ಡ' ಪಾಠವೇ ಸ್ವೀಕರಣ ಯೋಗ್ಯವೆಂದು ಮಾತ್ರ ಸೂಚಿಸಬಹುದು. ಕುಜನ ವಾರವನ್ನು ಕುಜವಾರವೆಂದಾಗಲಿ, ಶನಿಯ ವಾರವನ್ನು ಶನಿವಾರವೆಂದಾಗಲಿ ಕರೆಯಬಾರದು; ಅವು ಕೂರಗ್ರಹಗಳು; ಆದ್ದರಿಂದ ತೊಂದರೆಯುಂಟಾಗಬಹುದು. ಈ ಹೆಸರುಗಳನ್ನು ಮರೆ ಮಾಡಿ, ಮಂಗಳವಾರವೆಂದೂ, ವಡ್ಡ ವಾರವೆಂದೂ ಕರೆದರೆ ಆ ಗ್ರಹಗಳಿಗೂ ತೃಪ್ತಿ. ಕರೆದವರಿಗೂ ಕ್ಷೇಮ. ಹಾಗೆಯೇ 'ಧರ್ಮನಂದನಂ' ಎಂದು ಕರೆಯಬೇಕಾಗಿದೆ.

ಡಾ: ಎಂ.ಎಂ. ಕಲಬುರ್ಗಿಯವರು ಲೇಖನ ಸಂಭಾವ್ಯತೆ, ಅಂತಸ್ಸಂಭಾವ್ಯತೆಗಳನ್ನಾಧರಿಸಿ ನಿಜಪಾಠವನ್ನು ಒಪ್ಪಿಕೊಳ್ಳಲು ಕೆಲವು ಅಂಶಗಳನ್ನು ಗಮನಿಸಬೇಕೆಂದು ತಿಳಿಸಿದ್ದಾರೆ. ಇದರಿಂದ ಗ್ರಂಥಸಂಪಾದಕನಿಗೆ ಹಸ್ತಪ್ರತಿಗಳನ್ನು ಹೇಗೆ ಸಂಗ್ರಹಿಸಿ, ಸಂಪಾದಿಸಿ, ಪಾಠ ಪರಿಷ್ಕರಿಸಬೇಕೆಂಬುದಕ್ಕೆ ಹೆಚ್ಚಿನ ಮಾಹಿತಿ ದೊರೆತಂತಾಗುತ್ತದೆ.

1. ಏಕೈಕ ಹಸ್ತಪ್ರತಿಯಿದ್ದರೆ ಅದರಿಂದ ಲೇಖನ ಸಂಭಾವ್ಯತೆ, ಅಂತಸ್ಸಂಭಾವ್ಯತೆಗಳನ್ನು ಆಧರಿಸಿ ದೋಷ ಪಾಠವನ್ನು ಗುಣಕ್ಕೆ ತಿರುಗಿಸಬೇಕು.

[19]"ಕೊಳದೊಳ್ತಾವರೆ ಗಗನ ।
ಸ್ಥಳದೊಳ್ಯರೆಯೊಗೆವ ತೆಲದಿನೊಗೆದಂ ನಿಜ ನಿ ।
ರ್ಮ್ಮಳ ಯಶಮೆಸೆಯೆ ಸುಪುತ್ರಃ ।
ಕುಳದೀಪಕ ನೆನಿಸಿ ಪೊಗಳೆ ಧರೆ ಕಲಿದೇವ [ಂ] ॥"[19]

. ಇದರಲ್ಲಿ "ಗಗನದೊಳ್ಯೆರೆಯೊಗೆವ ತೆಅದಿಂ" ಅರ್ಥವಾಗದ ಪಾಠಕ್ಕೆ ಕಲಬುರ್ಗಿಯವರು 'ರೆ', 'ಶಿ, ಗಳಲ್ಲಿಯ ಅಕ್ಷರ ಸಾದೃಶ್ಯವೆಂಬ ಲೇಖನ ಸಂಭಾವ್ಯತೆ ಬಲದಿಂದ "ಗಗನದೊಳ್ಯಶಿಯೊಗೆವತೆಅದಿ" ಎಂದು ಶುದ್ಧಗೊಳಿಸಬಹುದೆಂದು ತಿಳಿಸಿದ್ದಾರೆ.

2. ಬೇರೆ – ಬೇರೆ ಪರಂಪರೆಗಳಿಗೆ ಸಂಬಂಧಿಸಿದ ಎರಡು ಹಸ್ತಪ್ರತಿಗಳಲ್ಲಿ ಒಂದರಲ್ಲಿಯ ಪಾಠ ಒಂದೇ ಬಗೆ ಮತ್ತು ಪ್ರಯೋಜಕವಿದ್ದರೆ ಈ ಸಾಮ್ಯ ಆ ಎರಡೂ ಪರಂಪರೆಗಳಿಗೆ ಇದ್ದಂತಹ ತಾಯಿ ಹಸ್ತಪ್ರತಿಯಿಂದ ಬಂದದ್ದಾಗಿದ್ದು ಅದನ್ನು ಕವಿಪಾಠವೆಂದು ಒಪ್ಪಿಕೊಳ್ಳಬೇಕಾಗುತ್ತದೆ ಎಂದು ಕಲಬುರ್ಗಿಯವರು ಈ ಉದಾಹರಣೆ ನೀಡಿದ್ದಾರೆ.

[20]" 1 ಕನ್ನಡಕ್ಕೆ ನಾಡವರೋಜರ್ (ಹಪ್ರ 110)
ಕನ್ನಡಕ್ಕೆ ನಾಡವರೋಜರ್ (ಹಪ್ರ 175)
11 ಕನ್ನಡಕ್ಕೆ ನಾಡವರೋಜರ್ (ಹಪ್ರ 125)
ಕನ್ನಡಕ್ಕೆ ನಾಡವರೋಜರ್ (ಹಪ್ರ 288)" [20]

1 ಮತ್ತು 2 ಇವು ಕವಿರಾಜಮಾರ್ಗದ ಬೇರೆ ಬೇರೆ ಕುಟುಂಬಗಳೆಂದು 'ರೋಜರ್' ಎಂಬ ಪಾಠ ಆಕಸ್ಮಿಕವಾಗಿರದೆ ಮೂಲ ಪಾಠ ಎಂದು ತಿಳಿಸಿದ್ದಾರೆ.

3. ಬೇರೆ ಬೇರೆ ಪರಂಪರೆಗೆ ಸಂಬಂಧಿಸಿದ ಎರಡಕ್ಕಿಂತ ಹೆಚ್ಚು ಹಸ್ತಪ್ರತಿಗಳಿದ್ದಾಗ ಭಿನ್ನ ಪಾಠ ಯೋಗ್ಯವೆನಿಸುತ್ತದೆ ಎಂಬುದಾಗಿ ಹೇಳಿದ ಡಾ: ಕಲಬುರ್ಗಿಯವರು ಅವುಗಳ ಬಹುಮತದ ಆಧಾರದ ಮೇಲೆ ಈ ಪಾಠವನ್ನು ಸ್ವೀಕರಿಸಬೇಕೆಂದು ಈ ಉದಾಹರಣೆ ನೀಡುತ್ತಾರೆ.

[21]" 'ಉದಾರಮಹೇಶ್ವರನೀಗೆ ಭೋಗಮಂ' ಇದನ್ನು ಪಂಪ ಭಾರತದಿಂದ ಸ್ವೀಕರಿಸಿ, ಪಂಪಭಾರತಕ್ಕೆ ಬಳಸಿದ ' ಫ ' ಪ್ರತಿಯನ್ನು ಬಿಟ್ಟು ಖ, ಗ, ಫ[1] 'ಭೋಗ' ವಿರುವುದರಿಂದ ಬಹು ಪ್ರತಿಗಳಲ್ಲಿಯ ಪಾಠವನ್ನು ಸ್ವೀಕರಿಸಲಾಗಿದೆ" [21]

4. ಹಸ್ತಪ್ರತಿಗಳಲ್ಲಿ ಕಠಿಣ ಪದಗಳನ್ನು ಸುಲಭಗೊಳಿಸುವುದು. ಈ ವಿಧಾನದ ಮೂಳಕ ಅಪರಿಚಿತ ದೇಶಿ ಪದಗಳಿಗೆ ಪ್ರತಿಯಾಗಿ ಸರಿ ಅಥವಾ ತಪ್ಪು ಅರ್ಥದ ಸುಲಭ ಪದಗಳನ್ನು ಬಳಸಲಾಗುತ್ತದೆ. ಇದರಿಂದ ಹಸ್ತಪ್ರತಿಗಳಲ್ಲಿ ಗೊತ್ತಿಲ್ಲದ, ಅರ್ಥವಾಗದ ಪದ ಬಳಕೆ ಯಾವ ರೀತಿ ಬಳಸುತ್ತಾರೆ ಎಂಬುದನ್ನು ಕಲಬುರ್ಗಿಯವರು ಗ್ರಂಥಸಂಪಾದಕರಿಗೆ ಈ ಕೆಳಕಂಡ ಪ್ರತಿಗಳ ಪರಿಚಯ ಮಾಡಿಕೊಟ್ಟಿದ್ದಾರೆ.

ಅ) 'ಬಂಡಿಯ ಮುಂಕಣಿಯಂ ಪಿಡಿದು' ನಂಬಿಯಣ್ಣನ ರಗಳೆಯಿಂದ ಆರಿಸಿದ ಈ ಸಾಲು ಮುಂಕಣಿಯಂ > ಮುಂದಂ ಎಂಬುದಾಗಿ ತಿದ್ದುಪಡಿಯಾಗಿದೆ.

ಆ) 'ಕಪ್ಪಡಿಯ ವೇಷದಿಂದಾನು ಬಂದಾಡುವ'
'ಬಸವಣ್ಣನವರ ವಚನ'ದಿಂದ ಆರಿಸಿದ ಈ ಸಾಲು ಕಪ್ಪಡಿ > ಕಪಟ ಎಂದು ತಿದ್ದುಪಡಿಯಾಗಿದೆ.

ಇ) 'ಕೊಂತಿ ಬೇಡೆ ಬೆಗಡದೆ ಕೊಟ್ಟೆ'
'ಗದಾಯುದ್ಧ' ದಿಂದ ಆರಿಸಿದ ಈ ಸಾಲು ಬೆಗಡದೆ > ಬೆಚ್ಚದೆ ಎಂದು ತಿದ್ದುಪಡಿಯಾಗಿದೆ. ಇಲ್ಲಿ ಮುಂಕಣಿ, ಕಪ್ಪಡಿ, ಬೆಗಡದೆ ಈ ಕಠಿಣ ಪದಗಳ ಬದಲಿಗೆ ಸರಳ ಅರ್ಥ ಪದಗಳನ್ನು ಹಸ್ತಪ್ರತಿಗಳಲ್ಲಿ ಬಳಸಿದ್ದಾರೆ. ಇದು ಸ್ವೀಕಾರ ಯೋಗ್ಯವೆಂದು ಕಲಬುರ್ಗಿಯವರು ತಿಳಿಸಿದ್ದಾರೆ.

5. ಭಿನ್ನ ಪರಂಪರೆಯ ಹಸ್ತಪ್ರತಿಗಳಲ್ಲಿ ಪ್ರಾಚೀನವಾದ ಹಸ್ತಪ್ರತಿ ಮೂಲಕ್ಕೆ ಸಮೀಪ. ಆದುದರಿಂದ, ಅದರ ಪಾಠಗಳು ಸ್ವೀಕಾರಾರ್ಹ.

[22]" 'ಚೆನ್ನಬಸವ ಪುರಾಣ' ದ ಸಂಸ್ಕರಣದ ಕಾರ್ಯಕ್ಕೆ ಬಳಸಿಕೊಂಡ ೧೦ ಪ್ರತಿಗಳಲ್ಲಿ [5 ಅಚ್ಚಿನ ಪ್ರತಿ, 5 ಕೈ ಬರಹದ ಕಾಗದ ಪ್ರತಿ] ಒಂದಾದ 'ಪ' ಪ್ರತಿಯನ್ನು ಕುರಿತು 'ಇದು ಕಾಗದದ ಮೇಲಿನ ಪ್ರತಿಯಾದರೂ ಇದನ್ನು ಬರೆದ ಕಾಲವು ಶಾತವಾಹನ ಶಕ 1932 ಎಂದರೆ ಕಾವ್ಯ ರಚನೆಯಾದ 25 ನೆಯ ವರ್ಷದಲ್ಲಿ."[22] ಎಂಬ ಉದಾಹರಣೆಯ ಭಿನ್ನ ಪರಂಪರೆಯ ಹಸ್ತಪ್ರತಿಗಳಲ್ಲಿ ಪ್ರಾಚೀನ ಹಸ್ತಪ್ರತಿಯ ಪಾಠ ಸ್ವೀಕಾರದಿಂದ ಗ್ರಂಥ ಸಂಪಾದನಾ ಕಾರ್ಯ ಸುಲಲಿತ.

ಸಂಪಾದಕ ತಾನು ಸಂಪಾದಿಸುತ್ತಿರುವ ಕೃತಿಗೆ ಸಂಬಂಧಪಟ್ಟ ಭಾಷೆಯ ಸಾಹಿತ್ಯ ಪ್ರಕಾರಗಳ ಹಿನ್ನೆಲೆಯೊಂದಿಗೆ ಛಂದಸ್ಸು, ವ್ಯಾಕರಣಗಳ ಜೊತೆಗೆ ಇತರ ಪರಿಜ್ಞಾನದ ಅರಿವು, ಗ್ರಂಥ ಸಂಪಾದನೆಯ ಮೂಲ ತತ್ವಗಳ ಅರಿವು ತನಗಿರಬೇಕು. ಪ್ರಾಚೀನ ಗ್ರಂಥಗಳನ್ನು ಪರಿಷ್ಕರಿಸಿ ಹಲವು ಹಸ್ತಪ್ರತಿಗಳ ಸಹಾಯದಿಂದ ಶುದ್ಧ ಪಾಠಗಳನ್ನು ನಿರ್ಣಯಿಸುವುದು ಗ್ರಂಥ ಸಂಪಾದನೆಯಾದರೆ, ಹಸ್ತಪ್ರತಿಗಳು ಹಸ್ತಾಂತರವಾಗುವಾಗ ಒದಗುವ ಅನೇಕ ರೀತಿಯ ಲೋಪದೋಷಗಳು, ಸ್ಖಾಲಿತ್ಯಗಳು ಮೂಲ ಕವಿಯ ಆಶಯ ಗ್ರಹಣಕ್ಕೂ, ಕಾವ್ಯಾಸ್ವಾದಕ್ಕೂ ಅಡ್ಡಿಯಾಗುತ್ತದೆ. ಇದನ್ನೆಲ್ಲ ಸಂಪಾದಕ ಸರಿಪಡಿಸಿ ಪರಿಷ್ಕರಿಸಿ ಒಂದು ಅತ್ಯುತ್ತಮ ಗ್ರಂಥವಾಗಿ ಹೊರತರುತ್ತಾನೆ. ಈ ಕಾರ್ಯ ಯಾವ ವಿಧಾನವಾಗಿ ಎಂಬುದನ್ನು ಸುದೀರ್ಘವಾಗಿ ಎಂ.ಎಂ. ಕಲಬುರ್ಗಿಯವರು ಚರ್ಚಿಸಿದ್ದಾರೆ.

**ಕಲಬುರ್ಗಿಯವರು ಸಂಪಾದಿತ ಕೃತಿಗಳು:**

ಡಾ: ಎಂ.ಎಂ. ಕಲಬುರ್ಗಿಯವರು ತಮ್ಮ ಪ್ರತಿಭೆಯ ಮೂಸೆಯಿಂದ ಇದುವರೆಗೆ 36 ಗ್ರಂಥಗಳನ್ನು ತಮ್ಮ ಸಂಶೋಧನೆಯ ಮುಖಾಂತರ ಸಂಪಾದಿಸಿ ಹೊರತಂದಿದ್ದಾರೆ. ಈ ಮೂಲಕ ಕನ್ನಡ ಸಾಹಿತ್ಯಕ್ಕೆ ತಮ್ಮದೇ ಆದ ಅಪೂರ್ವ ಕಾಣಿಕೆ ನೀಡಿದ್ದಾರೆ. ಅವರ ಸಾಹಿತ್ಯ ಕೃಷಿಯನ್ನು ಈ ರೀತಿ ವಿಭಾಗ ಮಾಡಬಹುದು.

* ಡಾ: ಎಂ.ಎಂ. ಕಲಬುರ್ಗಿಯವರ

ಗ್ರಂಥಸಂಪಾದನೆ




**ಸಂಪಾದಿತ ಕೃತಿಗಳು:**

1. ಬಸವ ಸ್ತೋತ್ರದ ವಚನಗಳು - 1978 ಸಂ. 1, 1982 ಸಂ.2.
2. ವಚನಶಾಸ್ತ್ರ ಸಾರ - 1982
3. ಮಲ್ಲನಾಥ ಪುರಾಣ ಸಂಗ್ರಹ - 1975
4. ಕೊಂಡಗುಳಿ ಕೇಶಿ ರಾಜನ ಕೃತಿಗಳು - 1978
5. ತೋಂಟದ ಸಿದ್ದೇಶ್ವರನ ಭಾವರತ್ನಾಭರಣ ಸ್ತೋತ್ರ - 1979
6. ಇಮ್ಮಡಿ ಚಿಕ್ಕ ಭೂಪಾಲನ ಸಾಂಗತ್ಯ - 1977

7. ನಿಂಬಸಾಮಂತ ಚರಿತೆ - 1981

8. ಶಬ್ದಮಣಿದರ್ಪಣ ಸಂಗ್ರಹ

9. ಕನ್ನಡ ಶಾಸನಸಂಪದ

10. ಶಾಸನ ಸೂಕ್ತಿ ಸುಧಾರ್ಣವ - 1997

11. ಕರ್ನಾಟಕದ ಕೈಪಯತ್ತುಗಳು

ಹೀಗೆ ಕಲಬುರ್ಗಿಯವರ ಗ್ರಂಥಸಂಪಾದನೆ ಅಮೂಲ್ಯವಾದುದು. ಅನೇಕ ಹಸ್ತಪ್ರತಿಗಳ ಸಹಾಯದಿಂದ ಗ್ರಂಥಗಳ ನಿರ್ಮಾಣ ಯಾವ ರೀತಿ ಸಾದ್ಯ, ಸಾಧ್ಯವಿಲ್ಲದಿದ್ದಾಗ ಅಂದರೆ ಪಂಪಭಾರತ, ಹರಿಹರನ ರಗಳೆ, ಜನ್ನಜ ಯಶೋಧರ ಚರಿತೆ ಮೊದಲಾದ ಕೃತಿಗಳ ಹಸ್ತಪ್ರತಿಗಳು ಸಿಗದಿದ್ದಾಗ "ಪರಿಷ್ಕರಣದ ಪರಿಷ್ಕರಣ ಪದ್ಧತಿ" ಯ ಮೂಲಕ ಗ್ರಂಥಸಂಪಾದನೆಯ ನಿರ್ಮಾಣ ಸಾಧ್ಯ ಎಂದು ಕಲಬುರ್ಗಿಯವರು ಆಶಿಸಿದ್ದಾರೆ.



* * * * *

# ಅಡಿಟಿಪ್ಪಣಿಗಳು

1. ಕನ್ನಡ ಗ್ರಂಥಸಂಪಾದನ ಶಾಸ್ತ್ರ
ಎಂ. ಎಂ. ಕಲಬುರ್ಗಿ
2. ಕನ್ನಡ ಗ್ರಂಥಸಂಪಾದನ ಶಾಸ್ತ್ರ
ಎಂ. ಎಂ. ಕಲಬುರ್ಗಿ
ಪುಟ - 12
3. ಕನ್ನಡ ಗ್ರಂಥಸಂಪಾದನೆ
ಡಿ.ಎಲ್.ಎನ್.
ಪುಟ-5
4. ಭಾರತೀಯ ಗ್ರಂಥ ಸಂಪಾದನ ಪರಿಚಯ
ಮುನ್ನುಡಿ
ಡಿ.ಎಸ್.ಎನ್.
ಪುಟ - xiii
5. ಕನ್ನಡ ಗ್ರಂಥಸಂಪಾದನ ಶಾಸ್ತ್ರ
ಎಂ. ಎಂ. ಕಲಬುರ್ಗಿ
ಪುಟ - 28
6. ಕನ್ನಡ ಗ್ರಂಥಸಂಪಾದನ ಶಾಸ್ತ್ರ
ಎಂ. ಎಂ. ಕಲಬುರ್ಗಿ
ಪುಟ - 10
7. ಸಿರಿಸಂಪದ
ಶಿರೂರ
ಪುಟ - 498 - 499
8. ಸಿರಿಸಂಪದ
ಶಿರೂರ
ಪುಟ - 10

9 ಮಹಾಮಾರ್ಗ

ಕನ್ನಡ ಹಸ್ತಪ್ರತಿ - ಗ್ರಂಥ ಸಂಪಾದನೆ

ವೈ.ಸಿ. ಭಾನುಮತಿ

ಪುಟ - 165

10. ಕನ್ನಡ ಗ್ರಂಥ ಸಂಪಾದನ ಶಾಸ್ತ್ರ

ಎಂ.ಎಂ. ಕಲಬುರ್ಗಿ

ಪುಟ - 22

11. ಕನ್ನಡ ಗ್ರಂಥ ಸಂಪಾದನ ಶಾಸ್ತ್ರ

ಎಂ.ಎಂ. ಕಲಬುರ್ಗಿ

ಪುಟ - 26

12. ಹಸ್ತಪ್ರತಿಶಾಸ್ತ್ರ

ಬಿ.ಎಂ.ಶ್ರೀ ಪ್ರತಿಷ್ಠಾನ

ಹಸ್ತಪ್ರತಿ ಸಂಗ್ರಹ ಕಾರ್ಯ ಮತ್ತು ಸಂರಕ್ಷಣೆ

ಡಾ. ಜಿ. ವರದರಾಜರಾವ್

13. ಕನ್ನಡ ಗ್ರಂಥ ಸಂಪಾದನಶಾಸ್ತ್ರ

ಎಂ.ಎಂ. ಕಲಬುರ್ಗಿ

ಪುಟ - 47

14. ಕನ್ನಡ ಗ್ರಂಥ ಸಂಪಾದನಶಾಸ್ತ್ರ

ಎಂ.ಎಂ. ಕಲಬುರ್ಗಿ

ಪುಟ - 22

15. ಕನ್ನಡ ಗ್ರಂಥ ಸಂಪಾದನಶಾಸ್ತ್ರ

ಎಂ.ಎಂ. ಕಲಬುರ್ಗಿ

ಪುಟ - 147 - 148

16. ಮಹಾಮಾರ್ಗ

ಕನ್ನಡ ಹಸ್ತಪ್ರತಿ ಮತ್ತು ಗ್ರಂಥಸಂಪಾದನೆ

ವೈ.ಸಿ. ಭಾನುಮತಿ

ಪುಟ - 167

17. ಕನ್ನಡ ಗ್ರಂಥ ಸಂಪಾದನೆ
ಎಂ.ಎಂ. ಕಲಬುರ್ಗಿ
ಪುಟ - 150 - 151

18. ಕನ್ನಡ ಗ್ರಂಥ ಸಂಪಾದನೆ
ಡಿ.ಎಲ್.ಎನ್.
ಪುಟ - 170

19. ಕನ್ನಡ ಗ್ರಂಥ ಸಂಪಾದನೆ
ಎಂ.ಎಂ. ಕಲಬುರ್ಗಿ
ಪುಟ - 155

20. ಕನ್ನಡ ಗ್ರಂಥ ಸಂಪಾದನೆ
ಎಂ.ಎಂ. ಕಲಬುರ್ಗಿ
ಪುಟ - 155

* - ಶಿರೂರು ರವರು ಅಭಿನಂದನ ಗ್ರಂಥವಾದ ಸಿರಿಸಂಪದದಿಂದ ಆಯ್ದುಕೊಳ್ಳಲಾಗಿದೆ.

## ಅಧ್ಯಾಯ – 4

# ಕಲಬುರ್ಗಿಯವರ ಹಸ್ತಪ್ರತಿಶಾಸ್ತ್ರ ಕೃತಿಯ ಸ್ವರೂಪ

ಡಾ: ಎಂ.ಎಂ. ಕಲಬುರ್ಗಿಯವರ ಕನ್ನಡ ಹಸ್ತಪ್ರತಿಶಾಸ್ತ್ರ ಬರುವುದಕ್ಕೆ ಮುಂಚೆ "ಹಸ್ತಪ್ರತಿ ಸಂಗ್ರಹ" ಅವುಗಳ ಸೂಚೀರಚನೆ ಮೊದಲಾದವುಗಳನ್ನೊಳಗೊಂಡ 'Manscriptology' ಎಂಬ ಶಾಸ್ತ್ರವೇ ಬೆಳೆದು ಬರಬೇಕಾಗಿದೆ (ಕನ್ನಡ ನುಡಿ 37–14) ಎಂಬುದಾಗಿ ಡಾ: ಆರ್.ಸಿ. ಹಿರೇಮಠರು 1974ರ ಸುಮಾರಿಗೆ ನುಡಿದು, ಈ ಶಾಸ್ತ್ರದ ಹೊಸ ಕಟ್ಟಡಕ್ಕೆ 'ಕೋನಶೀಲೆಯನ್ನಿತ್ತರು'. ಎಚ್. ದೇವಿರಪ್ಪನವರು 'ಕನ್ನಡ ಹಸ್ತಪ್ರತಿಗಳ ಇತಿಹಾಸ' ದಂತಹ ಗ್ರಂಥ ರಚನೆ (1977) ಯ ಮೂಲಕ ಈ ಕಟ್ಟಡಕ್ಕೆ ಬೇಕಾಗುವ ಸಾಮಗ್ರಿಗಳನ್ನು ಒಂದೆಡೆ ಕಲೆ ಹಾಕಿದರು. 1981 ರಲ್ಲಿ ನಡೆದ ವಿಚಾರಗೋಷ್ಠಿಗಳಲ್ಲಿ ಡಾ: ಎಂ.ಎಂ. ಕಲಬುರ್ಗಿಯವರು ತಮ್ಮ "ಹಸ್ತಪ್ರತಿ ಶಾಸ್ತ್ರ: ಅದರ ವಿವಿಧ ಮುಖಗಳು" ಮತ್ತು "ಹಸ್ತಪ್ರತಿ ಕ್ಷೇತ್ರ ಕಾರ್ಯ: ವಿಧಾನ – ಸಾಧನೆ" ಎಂಬೆರಡು ಲೇಖನಗಳನ್ನು ಸಾದರಪಡಿಸಿ ಈ ಹೊಸ ಶಾಸ್ತ್ರ ಕಟ್ಟಡದ ನೀಲನಕ್ಷೆ (Blue Print) ಯನ್ನು ಸಿದ್ಧಪಡಿಸಿಕೊಟ್ಟರು. ಆ ಮೂಲಕ ಕಲಬುರ್ಗಿಯವರು ಹಸ್ತಪ್ರತಿಶಾಸ್ತ್ರ ಕಟ್ಟಡ ನಿರ್ಮಾಣ ಮಾಡಿದರು. ಈ ರೀತಿಯಾಗಿ ಕಲಬುರ್ಗಿಯವರು ಹಸ್ತಪ್ರತಿಗೆ ಒಂದು 'ಶಾಸ್ತ್ರ' ರೂಪ ಕೊಟ್ಟರು.

[1] " ಹಸ್ತಪ್ರತಿಗಳ ಸಂಗ್ರಹಣ ಸೂಚೀಕರಣ, ವರ್ಗೀಕರಣ, ಲಿಪಿಕಾರರು ಮತ್ತು ಸೌಂದರ್ಯ ವಿನ್ಯಾಸಾದಿಗಳನ್ನು ಕುರಿತ ಲೇಖನಗಳು ಹಸ್ತಪ್ರತಿಶಾಸ್ತ್ರದ ಸ್ಪಷ್ಟವಾದ ಕಲ್ಪನೆ ಮೂಡುವುದಕ್ಕೆ ಮೊದಲೇ ಗ್ರಂಥಸಂಪಾದನಶಾಸ್ತ್ರದ ಅಂಗವಾಗಿ ಪ್ರಕಟಗೊಂಡವು. ಇಂಥ ಶಾಸ್ತ್ರದ ಬೆಳವಣಿಗೆಯ ಅವಧಿಯಲ್ಲಿ ಡಾ: ಎಂ.ಎಂ. ಕಲಬುರ್ಗಿಯವರು ಹಸ್ತಪ್ರತಿಶಾಸ್ತ್ರವನ್ನು ಗ್ರಂಥಸಂಪಾದನಶಾಸ್ತ್ರದಿಂದ ಬಿಡಿಸಿ ತೋರಿಸಲು ಮಾಡಿದ ಪ್ರಯತ್ನ ಪ್ರಥಮವೂ ಮಹತ್ವದ್ದು ಆಗಿದೆ."[1] ಡಾ: ಎಂ.ಎಂ. ಕಲಬುರ್ಗಿಯವರು ಹಸ್ತಪ್ರತಿಶಾಸ್ತ್ರದಲ್ಲಿ ಆಳವಾದ, ವಿಸ್ತಾರವಾದ ಅಧ್ಯಯನ ಮಾಡಿ, ಹಸ್ತಪ್ರತಿಯನ್ನು ಶಾಸ್ತ್ರ ಚೌಕಟ್ಟಿಗೆ ಅಳವಡಿಸಿದ್ದಾರೆ.

**ಅರ್ಥ:**

2 "ಲ್ಯಾಟಿನ್ನಿನ Manus (= ಕೈ) ಮತ್ತು Scriptum (= ಬರವಣಿಗೆ) ಯೆಂಬ ಪದಗಳ ಸಂಯುಕ್ತ ರೂಪವಾದ Manuscriptus (= ಕೈ ಬರವಣಿಗೆ) ಎಂಬುದನ್ನು ಇಂಗ್ಲಿಷ್ ಭಾಷೆ Manuscriptus ಎಂದು ತದ್ಭವೀಕರಿಸಿಕೊಂಡಿತು. ಇದನ್ನು ನಮ್ಮ ವಿದ್ವಾಂಸರು ಕೈ ಬರವಣಿಗೆ, ಹಸ್ತಪ್ರತಿ ಎಂದು ಭಾಷಾಂತರಿಸಿಕೊಂಡರು. ಇವುಗಳಲ್ಲಿ ಸಾರ್ವತ್ರಿಕ ಪ್ರಚಾರ ಪಡೆದ ಪದ 'ಹಸ್ತಪ್ರತಿ' ಎಂದು ಡಾ: ಎಂ.ಎಂ. ಕಲಬುರ್ಗಿಯವರು ಹಸ್ತಪ್ರತಿಯ ಬಗೆಗೆ ತಿಳಿಸಿದ್ದಾರೆ. ಪ್ರತಿಯ ಅಧ್ಯಯನ ಹಸ್ತಪ್ರತಿಶಾಸ್ತ್ರದ ವಿಷಯ ವಸ್ತು.

ಹಸ್ತಪ್ರತಿಶಾಸ್ತ್ರದ ಸ್ವರೂಪವನ್ನು ಕಲಬುರ್ಗಿಯವರ ಹಸ್ತಪ್ರತಿಶಾಸ್ತ್ರದ ವ್ಯಾಪ್ತಿಯಲ್ಲಿ ಕಂಡುಬರುವ ಉತ್ಪಾಧನ, ಪ್ರಸರಣ, ಸಂಗ್ರಹಣ, ವ್ಯವಸ್ಥಾಪನ ಮತ್ತು ಪ್ರಯೋಜನ ಎಂಬ ಐದು ಘಟ್ಟಗಳಲ್ಲಿ ಕ್ರಮಬದ್ಧವಾಗಿ ವಿವರಿಸಲಾಗುತ್ತದೆ.

ಯಾವುದೇ ವಸ್ತುವಿನ ಮೇಲೆ ಕೈಯಿಂದ ಬರೆದ ಕೃತಿಗೆ ಅಥವಾ ಕೃತಿಯ ಭಾಗಕ್ಕೆ 'ಹಸ್ತಪ್ರತಿ' ಎನ್ನಬಹುದು. ಈ ಹಸ್ತಪ್ರತಿಗಳ ಹುಟ್ಟು, ಬೆಳವಣಿಗೆ, ಸ್ವರೂಪ, ಮಹತ್ವ, ಸಂಗ್ರಹ, ಸಂರಕ್ಷಣೆ, ಸಂಪಾದನೆ, ಪ್ರಕಟಣೆ ಮೊದಲಾದ ಅಂಶಗಳನ್ನು ಒಳಗೊಂಡಿರುವುದೆ 'ಹಸ್ತಪ್ರತಿಶಾಸ್ತ್ರ ' ವಾಗುತ್ತದೆ.

ಕಲಬುರ್ಗಿಯವರ ಹಸ್ತಪ್ರತಿಶಾಸ್ತ್ರದ ಸ್ವರೂಪವನ್ನು ವಿವರಿಸುವುದೇ ಆದರೆ, ಐದು ಘಟ್ಟಗಳ ಕ್ರಮಬದ್ಧತೆಯ ಪ್ರಯೋಜನ ಪಡೆದು ವಿವರಿಸುತ್ತ ಹೋಗಬಹುದು. ಉತ್ಪಾದನ ಘಟ್ಟದಲ್ಲಿ ಹಸ್ತಪ್ರತಿಯ ಉತ್ಪಾದನೆ ಅಂದರೆ ಕೃತಿ - ಪ್ರತಿ – ಕಟ್ಟು ಯಾವ ಯಾವ ಹಂತದಲ್ಲಿ ನಿರ್ಮಾಣವಾಯಿತೆಂದು ಅದರ ಬಗೆಗೆ ಕಲಬುರ್ಗಿಯವರು ಯಾವ ರೀತಿ ವಿವರಣೆ ನೀಡಿದ್ದಾರೆಂಬುದು ತುಂಬ ಗಮನಾರ್ಹ. ಕವಿ ಬರೆದ ಒಂದು ಕೃತಿ ಲಿಪಿಕಾರನಿಗೆ ಸಿಕ್ಕಿ ಪ್ರತಿಯಾಗಿ ಉತ್ಪಾದನೆಗೆ ಒಳಪಡುತ್ತದೆ. ಆ ಪ್ರತಿ ಅನೇಕ ಪ್ರತಿಗಳಾಗಿ ಅದಕ್ಕೆ ಫಲಕ ಹೊದಿಸಿದ್ದಲ್ಲಿ ಅದು ಕಟ್ಟಾಗಿ ಸಿದ್ಧಗೊಳ್ಳುತ್ತದೆ. ಈ ರೀತಿಯಾಗಿ ಕಲಬುರ್ಗಿಯವರು ಕೃತಿ-ಕೃತಿಯು ಒಂದು ಅಥವಾ ಅನೇಕ ಪ್ರತಿಯಾಗುವುದು. ಈ ಪ್ರತಿ ಕಟ್ಟಾಗುವುದು, ಕೃತಿ-ಪ್ರತಿ- ಕಟ್ಟು ಇವುಗಳಿಗೆ ಅವಿನಾಭಾವ ಸಂಬಂಧವೇರ್ಪಡಿಸಿ, ಆದರೂ ಇವು ಬೇರೆ ಬೇರೆ ಲಕ್ಷಣಗಳನ್ನು ಹೊಂದಿರುವುದನ್ನು ತಿಳಿಸಿರುವುದು ಅವರು ಹಸ್ತಪ್ರತಿಯ ಕೃತಿಗಳು, ಕಟ್ಟುಗಳನ್ನು ಸೂಕ್ಷ್ಮವಾಗಿ ಗಮನಿಸಿರುವುದಕ್ಕೆ ಉತ್ತಮ ನಿದರ್ಶನವಾಗಿದೆ.

ಕಲಬುರ್ಗಿಯವರು ಉತ್ಪಾದನ ಕಾರ್ಯವನ್ನು 'ಅಲೇಖನ ಹಂತ', 'ಲೇಖನ ಹಂತ', 'ಗ್ರಂಥಹಂತ' ಎಂದು ವರ್ಗೀಕರಿಸಿದ್ದಾರೆ.

1. ಲೇಖನ ಹಂತ - ತಾಳೆಗರಿ, ಕಾಗದಗಳನ್ನು ಸಂಗ್ರಹಿಸಿ, ಬರೆಯುವುದಕ್ಕೆ ಸಿದ್ಧಪಡಿಸುವುದು.
2. ಲೇಖನಹಂತ - ಲೇಖನಕ್ಕೆ ಕವಿ ಇಲ್ಲವೆ ಲಿಪಿಕಾರರು ತೊಡಗುವುದು.
3. ಗ್ರಂಥನ ಹಂತ - ಫಲಕ ಸಿದ್ಧತೆ, ಬಣ್ಣ ಲೇಪನ, ಚಿತ್ರ ಬಿಡಿಸುವಿಕೆ, ದಾರ ಪವಣಿಸುವಿಕೆ ಇತ್ಯಾದಿಯಾಗಿ ವಿವರಿಸುತ್ತಾರೆ.

ಡಾ: ಎಂ.ಎಂ. ಕಲಬುರ್ಗಿಯವರು ಉತ್ಪಾದನ ಹಂತದ ಈ ಮೇಲಿನ ಸಾಮಗ್ರಿಗಳನ್ನು
ಲೇಖನ ಸಾಮಗ್ರಿ
ಲಿಪಿಕಾರ
ಗ್ರಂಥ ವಿನ್ಯಾಸ – ಈ ರೀತಿಯಾಗಿ ವಿವೇಚಿಸುತ್ತಾರೆ.

**ಲೇಖನ ಸಾಮಗ್ರಿ:**

ಒಂದು ಪ್ರತಿ ನಿರ್ಮಾಣವಾಗುವುದಕ್ಕೆ ಬೇಕಾಗುವ ಆಧಾರಗಳಾದ ತಾಳೆಗರಿ, ಕಾಗದ, ಅರಿವೆ, ಹಲಗೆ, ಚರ್ಮಗಳು;

ಪ್ರತಿ ಬರೆಯಲು ಬೇಕಾದ ಸಾಧನ – ಕಂಟ, ಲೇಖನಿ;
ಪ್ರತಿಗೆ ಲೇಪಿಸಲು – ಕಪ್ಪು, ಮಸಿ, ಬಳಪಗಳನ್ನು ಅದಕ್ಕೆ ತಕ್ಕ ಉದಾಹರಣೆಯಲ್ಲಿ ಕೃತಿಗಳನ್ನು ಚರ್ಚಿಸಿರುವುದು ಕಲಬುರ್ಗಿಯವರ ಹಸ್ತಪ್ರತಿಶಾಸ್ತ್ರದ ಒಂದು ವೈಶಿಷ್ಟ್ಯ.

[4]" ಸಾಮಗ್ರಿಗಳ ವಿಂಗಡಣೆಯಲ್ಲಿ ಡಿ.ಎಲ್.ಎನ್. ಅವರು 'ಲೇಖನ ಸಾಮಗ್ರಿ' ಎಂದು ಎಲ್ಲವನ್ನು ಒಟ್ಟಾಗಿ ಗ್ರಹಿಸಿದರೆ. "[4] ಸೀತಾರಾಮ ಜಾಗೀರದಾರ ಅವರು [5]" ಲೇಖ್ಯವಸ್ತು ಎಂಬ ಶೀರ್ಷಿಕೆಯಡಿಯಲ್ಲಿ ಲೇಖನ ಸಾಮಗ್ರಿಗಳ ಬಗೆಗೆ ವಿವರಗಳನ್ನು ಕೊಟ್ಟಿ 'ಬರೆಯಲು ಬಳಸಿದ ಸಾಧನಗಳು"[5] ಎಂಬ ಉಪ ಶೀರ್ಷಿಕೆ ಕಲ್ಪಿಸಿಕೊಂಡು ಲೇಖನ ಸಾಧನಗಳನ್ನು ಕುರಿತು

ವಿವರಿಸಿದ್ದಾರೆ. ಎಚ್. ದೇವಿರಪ್ಪನವರು [6] "ಪ್ರಾಚೀನ 'ಕನ್ನಡ ಸಾಹಿತ್ಯದಲ್ಲಿ ಲೇಖನ ಸಾಮಗ್ರಿಯ ಉಲ್ಲೇಖ' ಎಂದು ತಿಳಿಸಿ, ಅಲ್ಲಿ ಲೇಖ್ಯ ವಸ್ತುಗಳ ಪಟ್ಟಿ ನೀಡಿದ್ದಾರೆ.

**ತಾಳೆಗರಿ:**

ಕಲಬುರ್ಗಿಯವರು ತಾಳೆಗರಿಗಳನ್ನು ಯಾವ ರೀತಿ ಹಸ್ತಪ್ರತಿಗೆ ಸಹಾಯಕವಾಗಿದೆ ಎಂಬುದನ್ನು ವಿವೇಚಿಸಿದ್ದಾರೆ. ತಾಳೆ ಮರದ ಎಲೆಗಳೆ ತಾಳೆಗರಿಗಳು. ಈ ಮರಗಳು ಪಶ್ಚಿಮ ಘಟ್ಟದಲ್ಲಿ ಬೆಳೆಯುತ್ತವೆ. ಇದಕ್ಕೆ [7] "'ಪಡುವಣ ದೆಸೆಯಿಂದೊಪ್ಪುತ್ತಿರ್ಪ ಲವಣಾಂಬುದಿಗೆ ಪುರ್ಬುಂ ಪುಟ್ಟಿದ ಹಾಂಗಿರ್ದ ಘಟ್ಟದ ಸರೋವರಂಗಳಲ್ಲೇ ಕಪಾದಚರ ಕೆವರಿದ ಮುಂಡೆ ಮೌನವ್ರತದಿಂದೊಪ್ಪುತ್ತಿರ್ದ ದಿವ್ಯತಾಳಪತ್ರಮಂ ತಂದು"[7] ಎಂಬ ಮಾತನ್ನು ಪೂರಕವಾಗಿ ಕಲಬುರ್ಗಿಯವರು ಬಳಸಿದ್ದಾರೆ.

"ತಾಳೆಮರಗಳ ತೊಟ್ಟಿಲು" ಎಂದು ತಮಿಳುನಾಡನ್ನು ಕರೆದ 'ಕುಂಭಕೋಣಂ' ಊರಿನ 'ಅರುಣಾಚಲಂ' ಎಂಬ ಕವಿಯ ತಾಳೆಯಲ್ಲಿ 801 ಗುಣಗಳನ್ನು ಪಟ್ಟಿ ಮಾಡಿರುವ ವಿಚಾರವನ್ನು ಎಂ.ಎಂ. ಕಲಬುರ್ಗಿಯವರು ಸ್ಮರಿಸುತ್ತಾರೆ.

ಕವಿರಾಜ ಮಾರ್ಗ ಕಾಲದಿಂದ ತಾಳೆಮರ ಉಲ್ಲೇಖ ಕಂಡುಬಂದಿದ್ದು ಕಲಬುರ್ಗಿಯವರು 'ತಾಳೆಗರಿ' ಎಂಬುದಕ್ಕೆ ಸಾಹಿತ್ಯದಲ್ಲಿ ಯಾವ ಪದಗಳ ಬಳಕೆಯಲ್ಲಿದೆ ಎಂಬುದನ್ನು ತಾಳ, ಶೀತಾಳ, ತಾಳೆ, ಹಿಂತಾಳ, ಕರತಾಳ, ತಾಲ ಎಂದು ಗುರ್ತಿಸಿ ಕೊಟ್ಟಿದ್ದಾರೆ.

**ಕಾಗದ:**

ಕಾಗದ ತಾಳೆಗರಿಯಂತೆ ಬರೆಯಲು ಉಪಯೋಗಿಸುವ ಸಾಧನ [8] "ಅಭಿನವ ಮಂಗರಾಜನ (1298) 'ಪತ್ತಳಿಕೆಯೆನಲು ಕಾಗದಮಕ್ಕಂ' ಎಂಬ ಉಲ್ಲೇಖವನ್ನು ಗಮನಿಸಿದ ಕಲಬುರ್ಗಿಯವರು ಕಾಗದದ ಬಳಕೆ 14ನೇ ಶತಮಾನದಲ್ಲಿಯೆ ಇದಿತ್ತೆಂದು ವಿಶ್ಲೇಷಿಸಿದ್ದಾರೆ. ಕಾಗದ ಪ್ರತಿಗಳನ್ನು ವರ್ಗೀಕರಿಸಿ, ಸ್ವದೇಶಿ ಕಾಗದ ಮತ್ತು ವಿದೇಶಿ ಕಾಗದವೆಂದು ಕಾಗದದ ಉದ್ದ, ಅಗಲ, ಅದನ್ನು ತಯಾರಿಸುತ್ತಿದ್ದ ವಿಧಾನಗಳನ್ನು ತಿಳಿಸಿದ್ದಾರೆ. ಕಾಗದ ಪ್ರತಿಯ ವಿಷಯಕ್ಕೆ ಗಮನ ಹರಿಸಿದ್ದಾದರೆ 1557 ರಲ್ಲಿ ನಾಗವರ್ಮ ಬರೆದ 'ವರ್ಧಮಾನ ಪುರಾಣ' ಪ್ರಾಚೀನ ಕಾಗದ ಪ್ರತಿ ಎಂದು ಶ್ರೀ ಬಿ.ಎಸ್. ಸಣ್ಣಯ್ಯ ವಾದಿಸಿದರೆ ಶ್ರೀ ಎಚ್. ದೇವಿರಪ್ಪ 1500 ರ 'ಏಕೋತ್ತರ ಶತಸ್ಥಲ

ಟೀಕು' ಪ್ರಾಚೀನ ಕಾಗದ ಎಂದು ತಿಳಿಸಿದ್ದಾರೆ. ಇದನ್ನೆಲ್ಲ ಗಮನಿಸಿದ ಕಲಬುರ್ಗಿಯವರು 'ಏಕೋತ್ತರ ಶತಸ್ಥಲ ಟೀಕು' ಇದರ ರಚನೆಗೆ ಬಳಸಿದ ಕಾಗದ ಆಧುನಿಕ ಕಾಲಕ್ಕೆ ಸೇರಿದುದು ಎಂಬ ಅನುಮಾನದಿಂದ 1557 ರಲ್ಲಿ ರಚನೆಯಾದ 'ವರ್ಧಮಾನ ಪುರಾಣವೇ ಲಭ್ಯ ಪ್ರಾಚೀನ ಕಾಗದ ಪ್ರತಿಯೆಂದು ಹೇಳಬಹುದೆಂದು ಕಲಬುರ್ಗಿಯವರು ತಮ್ಮ ಹಸ್ತಪ್ರತಿಶಾಸ್ತ್ರ ಕೃತಿಯಲ್ಲಿ ತಿಳಿಸಿರುವುದು ಗಮನಾರ್ಹ. ಇದರಿಂದ ಕಲಬುರ್ಗಿಯವರು ಯಾವುದೇ ಕೃತಿಯನ್ನು ಅಭ್ಯಸಿಸಿದರು ತಮ್ಮ ಗಮನ ಕೃತಿಯಲ್ಲಿ ಕೇಂದ್ರೀಕೃತವಾಗಿರುತ್ತದೆ ಎಂದು ತಿಳಿದು ಬರುತ್ತದೆ.

**ಅರಿವೆ:**

ಲೇಖನ ಸಾಮಗ್ರಿಗಳಲ್ಲಿ ಅರಿವೆಯು ಸಹ ಬರವಣಿಗೆಗೆ ಸಾಧನ ಸಾಮಗ್ರಿಯಾಗಿತ್ತು. 'ಗದಾ ಯುದ್ಧದ' ಒಂದು ಮಾತನ್ನು ಗಮನಿಸಿದ ಕಲಬುರ್ಗಿಯವರು [9]"ಶರವೊಂದಂ ತೆಗೆದು ನಿಜೋದರದಿಂ ಲೆಕ್ಕಣಿಕೆ ಮಾಡಿ, ಗಜಮದ ಮಸಿಯಂ ತರಿಸಿ, ಪತಾಕಾಪಟದೊಳ್ ಬರೆದಟ್ಟಿದನ್"[9] ಅರಿವೆಯು ಗ್ರಂಥಲೇಖನಕ್ಕೆ ಬಳಸಿಲ್ಲವೆಂಬುದನ್ನು ಮೇಲಿನ ಉದಾಹರಣೆಯ ಮೂಲಕ ತಿಳಿಸಿದ್ದಾರೆ. ಈ ಅರಿವೆಯಿಂದ ಮಾಡಿದ ಕಡತಕ್ಕೆ ಮಸಿ ಲೇಪನ ಮಾಡಿ ಬಳಸುತ್ತಿದ್ದರು ಎಂದು ಕಲಬುರ್ಗಿಯವರು 'ಜ್ಞಾನಚಂದ್ರ ಚರಿತೆ' ಯನ್ನು ಅಭ್ಯಸಿಸಿ, ಮಕ್ಕಳು ಶಾಲೆಗೆ ಹೋಗುವಾಗ ಕಡತ ಒಯ್ಯುತ್ತಿದ್ದರೆಂದೂ, 'ಮೋಹನ ತರಂಗಿಣಿ' ಯಲ್ಲಿ 'ಬರಹವನರಿಯನಾ ಪದವಿಟ್ಟು ಕಡತದೊಳು ಮಾಡಿದ ಕೃತಿಯಲ್ಲ' ಎಂಬ ಕನಕರ ಮಾತನ್ನು ಉಲ್ಲೇಖಿಸಿದ್ದಾರೆ.

[10]" ಕಡತ, ಹಲಗೆ, ಚರ್ಮ, ಕಲ್ಲು, ಸುಟ್ಟ ಮಣ್ಣುಗಳ ಮೇಲೆ ಬರೆದ ಪ್ರತಿಗಳು, ಬರಹಗಳು, ಬಹುಪ್ರತಿ ರೂಪದಲ್ಲಿ ಸಿಗುವುದಿಲ್ಲವಾಗಿ, ಮತ್ತು ಇವುಗಳ ಮೇಲೆ ಬರೆದವುಗಳನ್ನು 'ಹಸ್ತಪ್ರತಿ' ಎನ್ನುವಂತಿಲ್ಲ" [10] ಎಂದು ಕಲಬುರ್ಗಿಯವರು ವಿವರಿಸಿದ್ದಾರೆ.

ಬರವಣಿಗೆಗೆ ಉಪಯೋಗಿಸುತ್ತಿದ್ದ ಲೇಪನ ಸಾಮಗ್ರಿಗಳ ಬಗೆಗೂ ಕಲಬುರ್ಗಿಯವರು ಕೊಡುವ ವಿವರ ಸ್ಪಷ್ಟವಾದುದು. [11]"ನೇಮಿಚಂದ್ರನು ಬಾಣ ಕಾದಂಬರಿಯನ್ನು ಸುಡಿಸಿ ಅದರ ಕಪ್ಪನ್ನು ತನ್ನ ಲೀಲಾವತಿ ಕೃತಿಗೆ ಲೇಪಿಸಿದ ಬಗೆಗೆ ದೊಡ್ಡಯ್ಯನ 'ಚಂದ್ರಪ್ರಭ ಚರಿತೆ' ಯಿಂದ ಕಲಬುರ್ಗಿಯವರು ತಿಳಿಸುತ್ತಾರೆ."[11] ಮಸಿಯನ್ನು ಸಿದ್ಧಪಡಿಸುವ ವಿಧಾನ ಬಸವ ಪುರಾಣದ ಹಸ್ತಪ್ರತಿಯಿಂದ" [11] ತುಂಬ ವಿವರಣಾತ್ಮಕ ವಿವರಣೆ ನೀಡಿದ್ದಾರೆ. [12]" ಡಿ.ಎಲ್.ಎನ್. ಅವರು ಮಸಿಯನ್ನು ಮಾಡುವ ವಿಧಾನಗಳು" [12] ಬಗೆಬಗೆಯಾಗಿರುವುದನ್ನು ಗಮನಿಸಬಹುದು. [13]" ಎಚ್.

ದೇವಿರಪ್ಪನವರು ಮಸಿಯನ್ನು ಅರಗಿನ ಮಸಿ, ರಾಗಿಯ ಮಸಿ, ಅಳಲೆ ಕಾಯಿಯ ಮಸಿ, ಇದ್ದಿಲು ಎಂದು ವರ್ಗೀಕರಿಸಿದ್ದಾರೆ. "[13]

ಕಲಬುರ್ಗಿಯವರು ಲೇಪನ ಸಾಮಗ್ರಿ ಬಗೆಗೆ ಈ ರೀತಿ ತಿಳಸಿದ್ದಾರೆ. ಇದ್ದಿಲಿನ ಪುಡಿಗೆ ನೀರು, ಗೊಂದು, ಸಕ್ಕರೆ ಮುಂತಾದವನ್ನು ಸಣ್ಣ ಪ್ರಮಾಣದಲ್ಲಿ ಬೆರೆಸಿ ಮಸಿ ಮಾಡುತ್ತಿದ್ದದ್ದನ್ನು ಚಂದ್ರ, ಹಿಂಗುಲ, ಅಂದಾಳ ಮುಂತಾದವುಗಳಿಂದ ಬಣ್ಣ ಬಣ್ಣದ ಮಸಿಗಳಿದ್ದವೆಂದು ತಿಳಿಸಿದ್ದಾರೆ. ಮಂಗರಾಜನ ನಿಘಂಟುವಿನಲ್ಲಿ "ದೌತಿ ಮಸಿಪಾತ್ರೆಯಕ್ಕುಂ" ಎಂಬುದನ್ನು ತಿಳಿಸುತ್ತ ಕಲಬುರ್ಗಿಯವರು 'ದೌತಿ' ಎಂದರೆ 'ಮಸಿ' ಸಂಗ್ರಹಿಸುವ ಪಾತ್ರೆ ಎನ್ನುತ್ತಿದ್ದರೆಂಬುದನ್ನು ನಮ್ಮ ಗಮನಕ್ಕೆ ತಂದಿದ್ದಾರೆ.

**ಲಿಪಿಕಾರರು:**

ಲಿಪಿಕಾರರ ಬಗೆಗೆ ತಿಳಿಸುತ್ತ ಕಲಬುರ್ಗಿಯವರು ಇದುವರೆಗೆ ಸಿಕ್ಕಂತಹ, ಮುಂದೆ ಸಿಗಬಹುದಾದ ಸುಮಾರು 40 ಕನ್ನಡ ಹಸ್ತಪ್ರತಿಗಳನ್ನು ಬರೆದ ಲಿಪಿಕಾರರನ್ನು

ಅ) ನಿಯುಕ್ತ ಲಿಪಿಕಾರರು

ಆ) ವೃತ್ತಿ ಲಿಪಿಕಾರರು

ಇ) ಹವ್ಯಾಸಿ ಲಿಪಿಕಾರರು

ಎಂದು ವಿಂಗಡಿಸಿದ್ದಾರೆ. ಆಯಾ ಲಿಪಿಕಾರರ ಲಿಪಿಸಿದ ಹಸ್ತಪ್ರತಿಗಳ ಕಾವ್ಯ, ಗ್ರಂಥ, ಕೃತಿ ಮುಂತಾದ ವಿಷಯಗಳನ್ನು ನಿಯಮಬದ್ಧವಾಗಿ ಹಸ್ತಪ್ರತಿಶಾಸ್ತ್ರದಲ್ಲಿ ತೋರಿಸಿಕೊಟ್ಟಿದ್ದಾರೆ. ಅಷ್ಟೇ ಅಲ್ಲದೆ ಇವರ ಅಧ್ಯಯನದಲ್ಲಿ ಸ್ತ್ರೀ ಲಿಪಿಕಾರರ ಬಗೆಗೂ ತಿಳಿಸುತ್ತಾರೆ. ವೈದಿಕ ಸಂಪ್ರದಾಯ, ಬೌದ್ಧ, ಜೈನ, ವೀರಶೈವ ಸಂಪ್ರದಾಯಗಳಲ್ಲಿ ಸ್ತ್ರೀ ಲಿಪಿಕಾರರು ಕಂಡುಬಂದಿರುವುದನ್ನು ಕಲಬುರ್ಗಿಯವರು ಸೂಚಿಸುತ್ತಾರೆ.

"ಬೂಕೈಲಾ ವುಳುವೆ ಮಹಾಮನೆ ಸೂತ್ರಾನುವರ್ತಿಗಳಾದ ಬಾಳಪ್ಪ ಸ್ವಾಮಿಗಳ ಕರಸಂಜಾತಳಾದ ಪುಟ್ಟ, ನಂಜಮ್ಮ", "ಶ್ರೀಮತಿ ಅಕ್ಕಗಳು ಬರೆದರು ಜಿನಮುನಿತನಯಾ" ಮುಂತಾದ ಉದಾಹರಣೆಗಳ ಮೂಲಕ ಸ್ತ್ರೀ ಲಿಪಿಕಾರರ ಅಸ್ತಿತ್ವವನ್ನು ಡಾ: ಎಂ.ಎಂ. ಕಲಬುರ್ಗಿಯವರು ತೋರಿಸಿಕೊಟ್ಟಿರುವುದು ತಮ್ಮ ಸಂಶೋಧನೆಯ ಫಲವೆಂದು ಹೇಳಬಹುದು.

ಲಿಪಿಯ ಬಗೆಗೆ ಕಲಬುರ್ಗಿಯವರು ಕೊಡುವ ವಿವರಣೆ ಉಲ್ಲೇಖಾರ್ಹವಾದುದು. "ಕನ್ನಡ ಹಸ್ತಪ್ರತಿಗಳಗಾಗಿ ಕನ್ನಡ ಲಿಪಿಯನ್ನೆ ಬಳಸಿರುವುದು ಸಹಜವಾಗಿದ್ದರೂ ಕೆಲವೊಮ್ಮ ತಿಗಳಾರಿ. ಮೋಡಿ, ಗ್ರಂಥಲಿಪಿ, ನಂದಿನಾಗರಿ ಲಿಪಿ ಬಳಸಿರುವ ಬಗೆಗೆ ತಿಳಿಸಿದ್ದಾರೆ.

ಧವಲಾ, ಜಯಧವಲಾ, ಮಹಾಧವಲಾ ಪ್ರತಿಗಳು ಕನ್ನಡ ಲಿಪಿಯಲ್ಲಿರುವುದರ ಬಗೆಗೆ ಅಭ್ಯಸಿಸಿ, ಹಸ್ತಪ್ರತಿಗಳ ಲಿಪಿಯ ಬಗೆಗೆ ಗ್ರಂಥಲಿಪಿ, ಮೋಡಿಲಿಪಿ, ಅರವಲಿಪಿ, ನಂದಿನಾಗರಿ, ಬ್ರಾಹ್ಮೀಲಪಿ, ಅಮರಗನ್ನಡಲಿಪಿ ಮುಂತಾದ ಲಿಪಿಗಳು ಬಳಕೆಯಾಗುತ್ತಿದ್ದ ಪ್ರವೇಶಗಳ ಬಗೆಗೆ ಕಲಬುರ್ಗಿಯವರು ತಮ್ಮ ಕೃತಿಯಾ ಹಸ್ತಪ್ರತಿಶಾಸ್ತ್ರದಲ್ಲಿ ಹಂತ-ಹಂತವಾಗಿ ವಿವರಣೆ ನೀಡಿದ್ದಾರೆ.

ಹಸ್ತಪ್ರತಿಯ ಉತ್ಪಾದನೆಯಷ್ಟೇ ಅವುಗಳ ಪ್ರಸರಣ ಮುಖ್ಯವಾದುದು. ಕೃತಿ ಬರೆದವರಿಗಿಂತ ಅದನ್ನು ಪ್ರಸಾರ ಮಾಡಿದವರು [14]"ಒಂದರ್ಥದಲ್ಲಿ ಗತಿಸಿಹೋದ ಕವಿಯನ್ನು ಕೃತಿ ರೂಪದಲ್ಲಿ ಬದುಕಿಸಿದ ಪುಣ್ಯಭೌಜನರೆಸಿಸುತ್ತಾರೆ"[14] ಹೀಗೆ ಮಾಡುವುದರ ಹಿಂದಿರುವ ಉದ್ದೇಶ ಸ್ವಪ್ರಯೋಜನಾರ್ಥ, ಬೌದ್ಧಿಕ ಹಸಿವು ಒಂದಾದರೆ, ಪರಪ್ರಯೋಜನಾರ್ಥದ (ಮೋಕ್ಷ ಸಂಪಾದನೆಯ) ಗ್ರಂಥದಾನ ಇನ್ನೊಂದು ಶಾಸ್ತ್ರದಾನ ಈ ರೀತಿಯಾಗಿ ಕರ್ನಾಟಕ ಹಸ್ತಪ್ರತಿಗಳು ಅನೇಕ ದಾರಿಗಳಲ್ಲಿ ಹುಟ್ಟಿ ಬೆಳೆದುಬಂದಿರುವುದರ ವಿವರಣೆಯನ್ನು ಇಲ್ಲಿ ನೀಡುತ್ತಾರೆ.

ಘನ ವಿದ್ವಾಂಸ ವ್ಯಕ್ತಿಗಳ ಮನೆಗಳಲ್ಲಿ ರಾಜಮನೆತನಗಳಲ್ಲಿ ಹಾಗೂ ವೈಯಕ್ತಿಕ ಭಂಡಾರಗಳ ಬಗೆಗೆ ಕಲಬುರ್ಗಿಯವರು ನೀಡುವ ಉದಾಹರಣೆ ಅತಿ ಮುಖ್ಯವೆನಿಸುತ್ತದೆ. ಅವುಗಳಲ್ಲಿ ಕೆಲವೊಂದನ್ನು ಗಮನಿಸಬಹುದು.

ಗದಾಯುದ್ಧ ಬರೆಯುವ ಕಾಲಕ್ಕೆ ರನ್ನನ ಹತ್ತಿರ ವ್ಯಾಸಭಾರತ, ವೇಣೀ ಸಂಹಾರ, ಊರುಭಂಗ, ಪಂಪಭಾರತ ಮೊದಲಾದ ಕೃತಿಗಳಿದ್ದವೆಂದು ಮಲ್ಲಿಕಾರ್ಜುನನ ಭಂಡಾರದಲ್ಲಿದ್ದ, ಕೃತಿಗಳನ್ನು ಕೇಶಿರಾಜ ಬಳಸಿಕೊಂಡು ಶಬ್ಧಮಣಿದರ್ಪಣ ರಚಿಸಿದ. ಕೆರೆಯ ಪದ್ಮರಸವನ್ನು ಪಾದಕ್ಕೆ ಆಹ್ವಾನಿಸಿದ ತ್ರಿಭುವನತಾತ "ಆನೆಯೊಳೆ ಸಕಲಶಾಸ್ತ್ರ ಪರಿಮಿ ತೋರು ಪುಸ್ತಕ ನಿಚಯಂ ಹೇರಿಕೊಂಡು ಬಂದಿದ್ದನೆಂದು ಪದ್ಮರಾಜಪುರಾಣ ತಿಳಿಸುತ್ತದೆ ಎಂಬ ಉತ್ತಮ ಆಧಾರಗಳನ್ನು ಕಲಬುರ್ಗಿಯವರು ನೀಡುತ್ತಾರೆ. ವೈದಿಕ, ಜೈನ ಮತ್ತು ವೀರಶೈವ ಧಾರ್ಮಿಕ ಪರಿಸರಗಳಲ್ಲಿ ಸಾರ್ವಜನಿಕ ಭಂಡಾರಗಳು ಯಾವ ರೀತಿ, ಹೇಗೆ ಬೆಳೆದು ಬಂದವೆಂಬುದಕ್ಕೆ ಕಲಬುರ್ಗಿಯವರು ಕೊಡುವ ನಿದರ್ಶನ ಪ್ರಾಚೀನ ಕರ್ನಾಟಕದ ಕೆಲವು ಹಸ್ತಪ್ರತಿ ಭಂಡಾರಗಳ ಪರಿಚಯ ನಮ್ಮ ಅರಿವನ್ನು ಗಗನಕ್ಕೆ ಮುಟ್ಟಿಸುತ್ತದೆ. ಅಷ್ಟರಮಟ್ಟಿಗೆ ಕಲಬುರ್ಗಿಯವರ ಹಸ್ತಪ್ರತಿ ಶೋಧ ಕೆಲಸ ಮಾಡಿದೆ ಎಂದು ಹೇಳಬಹುದು.

[15]"ವೈದಿಕಧರ್ಮದಲ್ಲಿ "ವೇದಾಧ್ಯಾಯಿಗಳನ್ನೊರ್ವಗಂ. ಶಾಸ್ತ್ರಾಧ್ಯಾಯ ಗಳಯ್ವದಿಂಬರ್ಗ೦. ತದುಪಾಧ್ಯಾಯಿಗಳು 2 ಭಟ್ಟ ದರ್ಶನ ನ್ಯಾ (ಸ) ಪ್ರಭಾಕರ ವ್ಯಾಖ್ಯಾತೃಗಳ್ಮೊ ವರ್ಗ೦ ವೇದ ಮನೋಧಿಸುಪಾಧ್ಯಾಯ ಮ್ಮೊವರ್ಗ೦ ಶಾಲೆಯ ಸರಸ್ವತೀ ಭಣ್ಡಾರಿಗೂ (=ರೊ) ವ್ವರ್ಗ್ಗವತ್ತು 257 ಮಾನಸರಿಗೆ"[15] ಈ ಶಾಸನದಲ್ಲಿ ಬರುವ ವಿಷಯ ಯಾವ ರೀತಿ ಹಸ್ತಪ್ರತಿಗಳು ವೈವಿಧ್ಯಕ್ಕನುಗುಣಗಾಗಿ ಗ್ರಂಥ ಸಂಗ್ರಹ ಬೆಳೆದಿದೆ ಎಂಬುದನ್ನು ಕಲಬುರ್ಗಿಯವರು ಮನವರಿಕೆ ಮಾಡಿಕೊಟ್ಟಿದ್ದಾರೆ.

[16]"ಜ್ಞಾನವನ್ನು ಮುಚ್ಚಿ ಹಾಕುವ ಜ್ಞಾನಾವರಣೀಯ ಕರ್ಮವನ್ನು ನಾಶ ಮಾಡುವುದಕ್ಕಾಗಿ ಧರ್ಮ ಗ್ರಂಥಗಳನ್ನು ಪ್ರತಿ ಮಾಡಿಕೊಳ್ಳುವ, ಮಾಡಿಸಿಕೊಳ್ಳುವ, ಮಾಡಿಕೊಡುವ ಸಂಪ್ರದಾಯ ಜೈನ ಧರ್ಮದಲ್ಲಿತ್ತೆಂದು"[16] ಜೈನ ಹಸ್ತಪ್ರತಿ ಭಂಡಾರಗಳು ಮೂಡಬಿದರೆ, ಕಾರ್ಕಳ, ವಾರಂಗ, ಹುಂಬಚ, ಶ್ರವಣಬೆಳಗೊಳ, ಆಲಿಯೂರು, ಕೊಲ್ಲಾಪುರ ಅನೇಕ ಪ್ರದೇಶಗಳ ಉಲ್ಲೇಖ ನೀಡಿದ್ದಾರೆ.

ವೀರಶೈವ ಧರ್ಮದಲ್ಲಿ ಹಸ್ತಪ್ರತಿಗಳು ವಿಫಲವಾಗುವುದಕ್ಕೆ, ಬೆಳೆಯುವುದಕ್ಕೆ ಕಲಬುರ್ಗಿಯವರು ನೀಡುವ ಕಾರಣ ಗಮನಸೆಳೆಯುವಂತಹುದು.

1) ಜೈನರ ಧರ್ಮಭಾಷೆ ಪ್ರಾಕೃತ, ಮಾತೃಭಾಷೆ ಕನ್ನಡ.
2) ಬ್ರಾಹ್ಮಣರ ಧರ್ಮಭಾಷೆ ಸಂಸ್ಕೃತ, ಮಾತೃಭಾಷೆ ಕನ್ನಡ.
3) ವೀರಶೈವರ ಧರ್ಮಭಾಷೆ ಮತ್ತು ಮಾತೃಭಾಷೆಗಳೆರಡೂ ಕನ್ನಡ.

ಇದರಿಂದಾಗಿ ಕನ್ನಡ ಹಸ್ತಪ್ರತಿಗಳು ವಿಘುಲವಾಗಿ ಬೆಳೆದವೆಂದು ತಿಳಿಸಿದ್ದಾರೆ.

ದಾಸರ ಕೀರ್ತನೆಗಳು, ಸರ್ವಜ್ಞನ ವಚನಗಳು, ವೈದ್ಯಶಾಸ್ತ್ರ, ಖಡ್ಗಶಾಸ್ತ್ರ, ಕೃಷಿಶಾಸ್ತ್ರ, ಪಾಕಶಾಸ್ತ್ರ, ಕಾಮಶಾಸ್ತ್ರ, ಶಿಲ್ಪಶಾಸ್ತ್ರ, ಗಣಿತ ಶಾಸ್ತ್ರ ಮೊದಲಾದ ಶಾಸ್ತ್ರ ಕೃತಿಗಳು ಹಲವು ಹಸ್ತಪ್ರತಿಗಳಲ್ಲಿ ರಚನೆಯಾಗಿರುವುದನ್ನು ಕಲಬುರ್ಗಿಯವರು ತಿಳಿಸಿಕೊಟ್ಟಿದ್ದಾರೆ. ಕಲಬುರ್ಗಿಯವರು ಹಸ್ತಪ್ರತಿಗಳ ಸಂಗ್ರಹ, ವಿಂಗಡಣೆಗಳಲ್ಲಿ ಚಾಣಾಕ್ಷತೆಯನ್ನು ತೋರಿರುವುದನ್ನು ಗಮನಿಸಬಹುದು. ಅಷ್ಟೇ ಅಲ್ಲದೆ, ಹಸ್ತಪ್ರತಿಗಳಲ್ಲಿ ಬಿಡಿಸಲಾದ ಚಿತ್ರಕಲೆಗೆ ಉದಾಹರಣೆಯಾಗಿ ಧವಲಾ ಕೃತಿ, ಪ್ರತಿಷ್ಠಾಕಲ್ಪ, ಉದ್ಧರಣಿ, ಶ್ರೀತತ್ವನಿಧಿ ಮೊದಲಾದ ಕೃತಿಗಳನ್ನು ಅಧ್ಯಯನ ಮಾಡಿ, ಅದರ ಬಗೆಗೆ ಮಾಹಿತಿ ನೀಡಿದ್ದಾರೆ.

ಸಾವಿರಾರು ವರ್ಷಗಳಿಂದ ಬೇರೆ ಬೇರೆ ಪ್ರದೇಶಗಳಲ್ಲಿ ಚದುರಿ ಹೋಗಿರುವ ಹಸ್ತಪ್ರತಿ ಸಂಗ್ರಹಣ ಕೆಲಸ ಸುಲಭವಾದುದಲ್ಲ. ಕರ್ನಾಟಕದಲ್ಲಿ ಸಾವಿರ ವರ್ಷಗಳಿಂದಲೂ ಹುಟ್ಟುತ್ತಾ, ಪ್ರಸರಣಗೊಳ್ಳುತ್ತಾ ಬಂದ ಹಸ್ತಪ್ರತಿಗಳು ಬೇರೆ ಬೇರೆ ಪ್ರದೇಶಗಳಲ್ಲಿ ಹರಡಿವೆ. ಅವುಗಳನ್ನು ಕಲಬುರ್ಗಿಯವರು "ಅರಕ್ಷಿತ ಹಸ್ತಪ್ರತಿ" ಗಳು ಮತ್ತು "ಸಂಗ್ರಹಿತ ಹಸ್ತಪ್ರತಿ" ಗಳು ಎಂದು ವರ್ಗೀಕರಿಸಿದ್ದಾರೆ. ಈ ಹಸ್ತಪ್ರತಿಗಳನ್ನು ಸಂಗ್ರಹಿಸುವ ವಿಧಾನ, ಸಂಗ್ರಹಿಸುತ್ತಾ ಬಂದ ಇತಿಹಾಸ, ಸಂಗ್ರಹಿಸಿದ ಸಂಸ್ಥೆಗಳು ಮತ್ತು ಅವು ಪ್ರಕಟಿಸಿದ ಸೂಚಿಗಳು ಕುರಿತು ಕಲಬುರ್ಗಿಯವರು ಹಸ್ತಪ್ರತಿಶಾಸ್ತ್ರದಲ್ಲಿ ವಿವೇಚಿಸಿದ್ದಾರೆ.

**ಕ್ಷೇತ್ರಕಾರ್ಯ:**

ಡಾ: ಕಲಬುರ್ಗಿಯವರು ಹಸ್ತಪ್ರತಿಶಾಸ್ತ್ರ ಸ್ವರೂಪದಲ್ಲಿ ಹಸ್ತಪ್ರತಿಗಳ ಶೋಧ, ಸಂಗ್ರಹಕ್ಕೆ ಕ್ಷೇತ್ರಕಾರ್ಯ, ಕ್ಷೇತ್ರಕಾರ್ಯಕ್ಕೆ ಸಂಬಂಧಿಸಿದ ವಿಶಿಷ್ಟ ವಿಧಾನ- ವಿಚಾರಗಳನ್ನು ಮಂಡಿಸಿದ್ದಾರೆ.




ಕ್ಷೇತ್ರಕಾರ್ಯ, ಹಸ್ತಪ್ರತಿ ಮತ್ತು ಒಡೆಯ – ಈ ಮೂರು ಘಟಕಗಳ ಬಗೆಗೆ ಹೇಳುತ್ತ, ಒಂದು ತ್ರಿಕೋನದ ಮೂಲಕ ಒಡೆಯನನ್ನು ಕ್ಷೇತ್ರಕಾರ್ಯ ಹೇಗೆ ಜಯಸುತ್ತದೆ, ಇದರಲ್ಲಿ ಕ್ಷೇತ್ರಕಾರ್ಯಕರ್ತನೆ ಪ್ರಧಾನ ಘಟಕ ಎಂದು ತಿಳಿಸಿದ್ದಾರೆ. ಈ ಕ್ಷೇತ್ರಕಾರ್ಯಕರ್ತ ಸೈದ್ಧಾಂತಿಕ ಜ್ಞಾನ, ಪ್ರಾಯೋಗಿಕ ಜ್ಞಾನ ಮತ್ತು ತಾಂತ್ರಿಕ ಜ್ಞಾನದ ಅರ್ಹತೆಗಳ ಮೂಲಕ ಹಸ್ತಪ್ರತಿಗಳ ಕ್ಷೇತ್ರಕಾರ್ಯ ನಡೆಸುವ ವಿಧಾನಗಳನ್ನು ಚರ್ಚಿಸುತ್ತಾರೆ. ಅನುಪಲಬ್ಧ ಕೃತಿಗಳ ಹಸ್ತಪ್ರತಿಗಳು ಹಾಗೂ ಅಪರೂಪದ ಹಸ್ತಪ್ರತಿಗಳ ಶೋಧಕ್ಕೆ ಕ್ಷೇತ್ರಕಾರ್ಯದಲ್ಲಿ ತುಂಬ ಮಹತ್ವವಿದ್ದು ಅವುಗಳ ಶೋಧಕ್ಕೆ ನಿರಂತರ ಸೆಣಸಬೇಕಾಗುತ್ತದೆ ಎಂಬ ಮಾತಿಗೆ ಕಲಬುರ್ಗಿಯವರು ತಮ್ಮ

ಅನುಭವದ ಮಾತನ್ನು ನೆನಪಿಸುತ್ತಾರೆ. 'ಕವಿರಾಜಮಾರ್ಗ' ಹಸ್ತಪ್ರತಿಯ ಸುಳಿವು ಹಿಡಿದು ಬೀದರ್ ಜಿಲ್ಲೆಯಲ್ಲಿ 10 ವರ್ಷಗಳ ಸಂಶೋಧನಾ ಪ್ರಯತ್ನ ಮಾಡಿರುವುದಾಗಿ ತಿಳಿಸಿದ್ದಾರೆ.

ಕಲಬುರ್ಗಿಯವರು ಕ್ಷೇತ್ರಕಾರ್ಯವನ್ನು ಎರಡು ವಿಧವಾಗಿ ವಿಂಗಡಿಸಿದ್ದಾರೆ.

ಅ) ಪ್ರತ್ಯಕ್ಷ ಕ್ಷೇತ್ರಕಾರ್ಯ

ಆ) ಪರೋಕ್ಷ ಕ್ಷೇತ್ರಕಾರ್ಯ

ಕಲಬುರ್ಗಿಯವರು ಅನೇಕ ಕ್ಷೇತ್ರ ಕಾರ್ಯಕರ್ತರು ಹಸ್ತಪ್ರತಿಯ ಶೋಧದಲ್ಲಿ ತೊಡಗಿ, ಹಸ್ತಪ್ರತಿಗಳನ್ನು ಅವಲೋಕಿಸುವಾಗ ಅವಸರದಿಂದ ಕೃತಿಗಳು ಕಣ್ತಪ್ಪಿ, ಅವುಗಳು ಹಾಗೆ ಉಳಿದು, ಆ ನಂತರ ಬಂದ ಸಂಶೋಧಕರಿಗೆ ಸಿಕ್ಕ ಪಟ್ಟಿಯಲ್ಲಿ ನೀಡಿದ್ದಾರೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಗಮನಿಸಬಹುದು.

1) ಶ್ರೀ ಭುಜಬಲ ಶಾಸ್ತ್ರಿಗಳ ಕಣ್ತಪ್ಪಿಸಿ ಮೂಡಬಿದರೆಯಲ್ಲಿ ಉಳಿದಿದ್ದ ನಾಗವರ್ಮನ 'ವರ್ಧಮಾನ ಪುರಾಣ' ಶ್ರೀ ಸಣ್ಣಯ್ಯನವರಿಂದ ಬೆಳಕಿಗೆ ಬಂದಿತು.
2) ಹುಲ್ಲೂರು ಶ್ರೀನಿವಾಸ ಜೋಯಿಸರು ನೋಡಿದ್ದ ಹಂಪೆಯ ಮಹಾಲಿಂಗನ 'ಬಾಲರಾಮನ ಸಾಂಗತ್ಯ' ಕೆಂಚಶೆಟ್ಟಿಸುತ ರಾಮಕೃತ, 'ಸಿರುಮನ' ಸಾಂಗತ್ಯದ ಏಕೈಕ ಹಸ್ತಪ್ರತಿಗಳಾಗಿದ್ದು ಅವು ಸಿಕ್ಕಿರಲಿಲ್ಲ. ಇತ್ತೀಚೆಗೆ ಲಭ್ಯವಾದವು.
3) ಹಳಕಟ್ಟಿಯವರು ಸಂಶೋಧಿಸಿದ 'ವಚನಶಾಸ್ತ್ರಸಾರ' ಇದರ ಮೂಲ ಆಕಾರ ಗ್ರಂಥ ಸಿಗಲೇ ಇಲ್ಲ.

ಹಸ್ತಪ್ರತಿಗಳು ಹೇರಳವಾಗಿದ್ದರೂ ಅವುಗಳನ್ನು ಸಂರಕ್ಷಿಸಲು ಮುಂದಾದ ಸರಕಾರ, ವಿಶ್ವವಿದ್ಯಾನಿಲಯಗಳು ಕ್ರಮ ತೆಗೆದುಕೊಂಡಿದ್ದರೂ ಕಾರ್ಯಗತ ಮಾಡುವಲ್ಲಿ ವಿಳಂಬ ತೋರಿರುವುದನ್ನು ಕಲಬುರ್ಗಿಯವರು ನಿರ್ಭಯವಾಗಿ ತೋರಿಸಿಕೊಟ್ಟಿದ್ದಾರೆ.

ಸಂಗ್ರಹದ ಬಗೆಗೆ ಬಿ.ಎಸ್. ಸಣ್ಣಯ್ಯನವರ ಮಾಹಿತಿಯನ್ನು ವೀಕ್ಷಿಸಿದ್ದೇ ಆದರೆ ಅವರ ಪ್ರಕಾರ, [17] "ದೊರೆತ ಗ್ರಂಥಗಳು ನಮ್ಮಲ್ಲಿ ಇವೆಯೇ? ಇದ್ದರೆ ಎಷ್ಟಿವೆ? ಎಂಬೆಲ್ಲಾ ಮಾಹಿತಿಗಳನ್ನು ಪರಿಶೀಲಿಸುವ ಸಾಧನವಾದರೂ ಇರಬೇಕು. ಇಲ್ಲದಿದ್ದಲ್ಲಿ ಯಾವ ಹಸ್ತಪ್ರತಿಗೆ ಎಷ್ಟು ಪ್ರಾಮುಖ್ಯತೆ ಕೊಡಬೇಕೆಂಬ ಪರಿಜ್ಞಾನವೇ ಇರುವುದಿಲ್ಲ. ಹಲವಾರು ಹಸ್ತಪ್ರತಿಗಳು ದೊರೆತಾದ ಎಲ್ಲವನ್ನೂ

ಒಂದು ಸಂಸ್ಥೆಗೆ ನೀಡಿದರೆ ಪರಿಶೀಲಿಸಲು ಸಮಯವಿರುತ್ತದೆ. ಇಲ್ಲದಿದ್ದರೆ, ಅಂತಹವುಗಳ ಸಂಗ್ರಹ ಕಷ್ಟವಾಗುತ್ತದೆ."[17]

ಮೈಸೂರಿನ ಪುರಾತತ್ವ ಇಲಾಖೆ 1884 ರಲ್ಲಿ ಪ್ರಾರಂಭವಾಗಿ ಅದರ ಮುಖ್ಯಸ್ಥರಾದ ಬಿ.ಎಲ್. ರೈಸ್ ರವರ ಮೂಲಕ ಹಸ್ತಪ್ರತಿ ಸಂಗ್ರಹ ಕಾರ್ಯ ಆರಂಭವಾಯಿತೆಂದು ತಿಳಿಸಿದ ಕಲಬುರ್ಗಿಯವರು 1939 ರಲ್ಲಿ 'ಕನ್ನಡ ಸಂಶೋಧನಾ ಸಂಸ್ಥೆ', 1963 ರಲ್ಲಿ ಡಾ: ಆರ್.ಸಿ. ಹಿರೇಮಠ ಅವರ ನೇತೃತ್ವದಲ್ಲಿ ವಚನ ವಾಙ್ಮಯ ಸಂಗ್ರಹ, ಸಂಸ್ಕರಣ ಮತ್ತು ಪ್ರಕಟಣೆ ಯೋಜನೆ' ಅಡಿಯಲ್ಲಿ ಹಸ್ತಪ್ರತಿಗಳ ಸಂಗ್ರಹ ಶಾಖೆಯು ಬೆಳಕಿಗೆ ಬಂದಂತಹ ಅನೇಕ ಉದಾಹರಣೆಗಳನ್ನು ಹಸ್ತಪ್ರತಿಶಾಸ್ತ್ರದ ಕೃತಿಯಲ್ಲಿ ನೀಡುತ್ತಾರೆ.

ಕಲಬುರ್ಗಿಯವರ ಹಸ್ತಪ್ರತಿಶಾಸ್ತ್ರದ ಸ್ವರೂಪದಲ್ಲಿ ಗಮನಿಸಬೇಕಾದ ಮುಖ್ಯ ಅಂಶವೆಂದರೆ, ಹಸ್ತಪ್ರತಿಗಳ ಸಂಗ್ರಹದಲ್ಲಿ ಐದು ಹಂತಗಳನ್ನು ಗುರ್ತಿಸುವುದು. ಇವೆಲ್ಲಾ ಒಳನಾಡಿನಲ್ಲಿ ಸಂಗ್ರಹಗೊಂಡವೆಂದು ತಿಳಿಸುತ್ತಾ, ಒಳನಾಡಿನ ಧಾರ್ಮಿಕ ಕೇಂದ್ರಗಳ ಕೃತಿಯನ್ನು ನೀಡುತ್ತಾರೆ. ಕಲಬುರ್ಗಿಯವರು ಆಧುನಿಕ ಹಸ್ತಪ್ರತಿ ಭಂಡಾರಗಳನ್ನು ಕುರಿತು ವಿವೇಚಿಸುತ್ತಾರೆ. ಅದರಲ್ಲಿ ಅನೇಕ ಗ್ರಂಥಾಲಯಗಳು, ಅಧ್ಯಯನ ಸಂಸ್ಥೆಗಳು, ರೀಸರ್ಚ್ ಇನ್ಸ್ಟಿಟ್ಯೂಟ್, ವಿಶ್ವವಿದ್ಯಾನಿಲಯಗಳು, ಸಾಹಿತ್ಯ ಪರಿಷತ್ತುಮ - ಮುಂತಾದವುಗಳನ್ನು ಹೆಸರಿಸಿ, ಅವುಗಳಿಂದ ಹಸ್ತಪ್ರತಿಗಳ ಸಂಗ್ರಹ, ಪರಿಷ್ಕರಣ, ಪ್ರಕಟಣಾ ಕಾರ್ಯ ಹೇಗೆ ನಡೆದುಬಂದವೆಂಬುದರ ಬಗೆಗೆ ಸವಿವರ ಸಮೇತವಾಗಿ ಮಾಹಿತಿಯನ್ನು ನೀಡಿದ್ದಾರೆ.

**ಸೂಚಿಗಳು:**

[18]"ಹಸ್ತಪ್ರತಿ ಸೂಚಿಗಳ ಬಗೆಗೆ ಹೇಳುತ್ತ, ಎಂ.ಎಂ. ಕಲಬುರ್ಗಿಯವರು ಆಧುನಿಕ ಹಸ್ತಪ್ರತಿ ಭಂಡಾರಗಳು ಸೂಚಿ ರಚನೆಯನ್ನು ಒಂದು ಶಿಸ್ತನ್ನಾಗಿ ಬೆಳೆಸಿವೆ. ಒಂದು ಶೈಕ್ಷಣಿಕ ಶಿಸ್ತಾಗದಿದ್ದರೂ, ಓದುಗರ ಪ್ರಯೋಜನ ದೃಷ್ಟಿಯಿಂದ ಸೂಚಿಯನ್ನು ರಚಿಸುವುದು ನಮ್ಮಲ್ಲಿ ಪ್ರಾಚೀನ ಕಾಲದಿಂದಲೂ ಬೆಳೆದುಬಂದಿದೆ".[18]

ಆಧುನಿಕ ಕಾಲದಲ್ಲಿ ಸೂಚಿ ರಚಿಸುವ ಕ್ರಿಯೆ ಭಾರತದಲ್ಲಿ ಸರ್. ವಿಲಿಯಂ ಜ್ಯೋ ರವರಿಂದ ಪ್ರಾರಂಭವಾಯಿತು. ಕನ್ನಡದಲ್ಲಿ ಎ ಡಿಸ್ಕ್ರಿಪ್ಟಿವ್ ಕೆಟಲಾಗ್ ಆಫ್ ದಿ ಮ್ಯಾನ್ಯುಸ್ಕ್ರಿಪ್ಟ್ ಎಂಬುದು ಪ್ರಥಮ ಸೂಚಿಯೆಂದು ತೋರಿಸಿಕೊಟ್ಟು ಯಾದಿರೂಪದ ಸೂಚಿ, ವಿವರಣಾತ್ಮಕ ಸೂಚಿ, ಲೇಖನ ರೂಪದ ಸೂಚಿ ಎಂದು ವರ್ಗೀಕರಿಸಿದ್ದರೂ ಅಭ್ಯಾಸದ ಅನುಕೂಲಕ್ಕಾಗಿ-

1. ಮದ್ರಾಸ್ ಹಸ್ತಪ್ರತಿಗಳ ಸೂಚಿ
2. ಮೈಸೂರು ಹಸ್ತಪ್ರತಿಗಳ ಸೂಚಿ
3. ಧಾರವಾಡ ಹಸ್ತಪ್ರತಿಗಳ ಸೂಚಿ
4. ಬೆಂಗಳೂರು ಮತ್ತು ಹೈದರಾಬಾದ ಹಸ್ತಪ್ರತಿಗಳ ಸೂಚಿ
5. ಇತರ ಸೂಚಿಗಳು
6. ಲೇಖನ ರೂಪದ ಸೂಚಿಗಳು

ಎಂದು ವರ್ಗೀಕರಣ ಮಾಡಿ ತಿಳಿಸಿದ್ದಾರೆ. ಈ ಸೂಚಿಗಳ ಬಗೆಗೆ ಯಾವ ವಿಧಾನದ ಮೂಲಕ ಪ್ರಕಟಿಸಬಹುದೆಂಬುದನ್ನು ತಾವೇ ತಿಳಿಸಿಕೊಟ್ಟಿದ್ದಾರೆ. ಅದನ್ನು ಗಮನಿಸಿದ ಸಂಶೋಧಕ ತನ್ನ ಕಾರ್ಯವನ್ನು ಸುಲಭವಾಗಿ ಪೂರ್ತಿ ಮಾಡಬಹುದು. ಕಲಬುರ್ಗಿಯವರ ಸೂಚಿಗಳ ವಿಂಗಡಣೆ ಈ ಕೆಳಕಂಡಂತಿದೆ:

1. ಕ್ರಮ ಸಂಖ್ಯೆ
2. ಸೂಚಿಯ ಹೆಸರು
3. ಸಂಪಾದಕರು
4. ಪ್ರಕಟಣೆ – ಇಸವಿ
5. ಪ್ರತಿಸಂಖ್ಯೆ

ಈ ರೀತಿ ಕನ್ನಡ ಹಸ್ತಪ್ರತಿ ಸೂಚಿಗಳ ಸಂಪೂರ್ಣ ಮಾಹಿತಿ ನೀಡಿದ್ದಾರೆ. ಇವೆಲ್ಲವೂ ಸಹ ಸಂಶೋಧಕನ ಅಭ್ಯಾಸಕ್ಕೆ ಯೋಗ್ಯವೆನಿಸುತ್ತದೆ.

"ಕಷ್ಟೇನ ಲಿಖಿತಂ ಮಯಂ ಯತ್ನೇನ ಪರಿಪಾಲಯೇತ್" ಎಂದು ನಮ್ಮ ಹಸ್ತಪ್ರತಿ ಲಿಪಿಕಾರರು ಹೇಳುವುದನ್ನು ತಿಳಿಸುತ್ತ ಕಲಬುರ್ಗಿಯವರು ಒಂದು ಪದ್ಯವನ್ನು ನಿದರ್ಶನವಾಗಿ ನೀಡುತ್ತಾರೆ.

[19] " .................. ಬರೆದಂಗೆ ಬರೆದಂಗೆ ವಾಚಿಪಂ ।
ಗುರುತರಾನಂದದಿಂದಿದರ ತಾತ್ಪರ್ಯಮಂ ವಿಸ್ತರಿಸಿ ಪೇಳ್ದವಂಗೆ ।
ಪರಮಸದ್ಭಕ್ತಿಯಿಂದಾದರಿಸಿ ಕೇಳ್ದಂಗೆ .....।
ಸಕಲ ಸೌಲಭ್ಯಗಳು, ಸೌಭಾಗ್ಯಗಳು ಒದಗಿ ಬರಲಿ ಎಂದು ಹಾರೈಸಿದ್ದಾರೆ.

ಇಲ್ಲಿ ಪ್ರತಿಗಳ ರಕ್ಷಣೆಯ ಮೂಲಕ ಕೃತಿಗಳನ್ನು ಸಂಗ್ರಹಿಸಿ, ವ್ಯವಸ್ಥಾಪನೆ ಮಾಡುವುದು, ಇಂದು ಭಾರತದ ವಿವಿಧ ಸಂಸ್ಥೆಗಳಲ್ಲಿ 10 ಸಾವಿರಕ್ಕೂ ಮಿಕ್ಕ ಹಸ್ತಪ್ರತಿಗಳಿವೆ ಎಂದು ತಿಳಿಸಿದ್ದಾರೆ.

ಹಸ್ತಪ್ರತಿ ಗ್ರಂಥಾಲಯಗಳನ್ನು ವೈಯಕ್ತಿಕ ಸಂಸ್ಥೆ, ಸಾರ್ವಜನಿಕ ಸಂಸ್ಥೆ ಮತ್ತು ಸರಕಾರಿ ಸಂಸ್ಥೆ ಎಂದು ಮೂರು ವಿಭಾಗಗಳಲ್ಲಿ ವರ್ಗೀಕರಿಸಿ, ಆ ಮೂಲಕ ಹಸ್ತಪ್ರತಿಗಳ ವ್ಯವಸ್ಥಾಪನೆಯ ಬಗೆಗೆ ಚರ್ಚಿಸುತ್ತಾರೆ. ಈ ಅಪೂರ್ವ ಸಂಪತ್ತಿನ ಸಂರಕ್ಷಣೆಯನ್ನು ವೈಜ್ಞಾನಿಕವಾಗಿ ರಕ್ಷಿಸಿ, ಬಳಸಿಕೊಳ್ಳುವ ಬಗೆಗೆ ತಿಳಿಸಿದ ಕಲಬುರ್ಗಿಯವರು ಆಕರಣ, ತಾಂತ್ರಿಕ, ಸೂಚೀಕರಣ, ವರ್ಗೀಕರಣ, ಸಂರಕ್ಷಣೆ, ಗ್ರಂಥಸಂಪಾದನ, ಗ್ರಂಥಪರಿಚಲನ ಅಧ್ಯಯನ, ಗ್ರಂಥಾಲಯ, ಪ್ರದರ್ಶನ, ಸಮಾಲೋಚನ, ಸಭಾಗೃಹ, ವಿಶ್ರಾಂತಿ ಎಂದು 12 ವಿಭಾಗಗಳನ್ನಾಗಿ ವಿಂಗಡಿಸಿ,"[19] ಪರಿಪೂರ್ಣ ವಾಸ್ತುವಿನ ನೀಲನಕ್ಷೆಯನ್ನು ಬಿಡಿಸಿ, ಪ್ರತಿ ವಾಕ್ಯವು ನಮ್ಮ ಅರಿವಿಗೆ ಬರುವಂತೆ ತಿಳಿಸಿದ್ದಾರೆ. ಹಸ್ತಪ್ರತಿಗಳ ವ್ಯವಸ್ಥೆ ಮತ್ತು ಸಂಶೋಧಕ ಅಭ್ಯಾಸಿಗಳ ವ್ಯಾಸಂಗ ಕ್ರಿಯೆಗಳಿಗೆ ಸಹಾಯಕವಾಗುವಂತೆ ಹಸ್ತಪ್ರತಿ ಭಂಡಾರವನ್ನು ಅಸ್ತಿತ್ವಕ್ಕೆ ತರಬೇಕೆಂಬುದು ಕಲಬುರ್ಗಿಯವರ ಉದ್ದೇಶ. ಈ ಉದ್ದೇಶಕ್ಕೆ ತಾವು ಮಾಡಿದ ಸಂಶೋಧನ ಕ್ರಿಯಯೇ ಉದಾಹರಣೆ.

[20]"ನಮಗೆ ದೊರೆತ ಪ್ರಾಚೀನ ವಸ್ತುಗಳೆಲ್ಲ ದೇಶದ ಆಸ್ತಿ. ಅವುಗಳ ರಕ್ಷಣೆ ನಮ್ಮ ಕರ್ತವ್ಯ. ಈ ದಿಶೆಯಲ್ಲಿ ಸರ್ಕಾರ ಪುರಾತತ್ವ ಇಲಾಖೆ ಕಾರ್ಯನಿರತವಾಗಿದೆ. ಆದರೆ, ಹಸ್ತಪ್ರತಿಗಳ ಸಂರಕ್ಷಣೆಗೆ ಅಂತಹ ಇಲಾಖೆ ಇಲ್ಲ ಎಂಬುದಾಗಿ ಕಲಬುರ್ಗಿಯವರು ತಿಳಿಸುತ್ತಾರೆ."[20]

ಈ ತಪ್ಪನ್ನು ತಿದ್ದುವ ರೀತಿಯಲ್ಲಿ ಈಗ 'ರಾಜ್ಯ ಕೇಂದ್ರ ಹಸ್ತಪ್ರತಿ ಇಲಾಖೆ' ಯನ್ನು ಕರ್ನಾಟಕ ಸರ್ಕಾರ ಅಸ್ತಿತ್ವಕ್ಕೆ ತರಬೇಕಾಗಿದೆ. ಇದಲ್ಲದೆ, ಗ್ರಂಥಾಲಯ ಶಾಸ್ತ್ರದಂತೆ ಹಸ್ತಪ್ರತಿಶಾಸ್ತ್ರವು ಒಂದು ಶಾಸ್ತ್ರವಾಗಿ ನವೀಕರಣಗೊಂಡು, ಸಾಮಾಜಿಕ, ಶೈಕ್ಷಣಿಕ ಪ್ರತಿಷ್ಠೆ ಪಡೆಯಬೇಕಾಗಿದೆ ಎಂದಿದ್ದಾರೆ. ಹಸ್ತಪ್ರತಿ ಕ್ಷೇತ್ರದಲ್ಲಿ ಒಂದು ಚಳುವಳಿ ನಡೆಯಬೇಕೆಂದು, ಅದರ ಅಂಗವಾಗಿ ಹಸ್ತಪ್ರತಿ ಸಂಗ್ರಹಣ, ಸಂರಕ್ಷಣ, ಹಸ್ತಪ್ರತಿಶಾಸ್ತ್ರದ ಅಳವಡಿಕೆ, ಗ್ರಂಥ ಕಾರ್ಯ, ಯಂತ್ರೋಪಕರಣಗಳ ಬಳಕೆ, ಹಸ್ತಪ್ರತಿ ಭಂಡಾರದ ನವೀಕರಣ, ಹಸ್ತಪ್ರತಿ ಅಧ್ಯಯನ ತರಬೇತಿ ವರ್ಗ, ರಾಜ್ಯ ಹಸ್ತಪ್ರತಿ ಇಲಾಖೆಯ ಸ್ಥಾಪನೆ – ಈ ಕೆಲಸಗಳು ನಡೆಯುವ ಮೂಲಕ ಹಸ್ತಪ್ರತಿಗಳ ಅಧ್ಯಯನ, ಸಂರಕ್ಷಣೆ, ಪ್ರಯೋಜನಾತ್ಮಕವಾಗಿ ಬೆಳೆಯಬೇಕೆನ್ನುವ ಕಲಬುರ್ಗಿಯವರ ವಿಚಾರ, ವಿನ್ಯಾಸ, ಸಲಹೆ-ಸೂಚನೆಗಳು ಸ್ವೀಕಾರಾರ್ಹವಾಗಿವೆ.

ಕಲಬುರ್ಗಿಯವರು ಹಸ್ತಪ್ರತಿಗೆ ಶಾಸ್ತ್ರ ರೂಪವನ್ನು ತಂದು ಕೊಡುವ ಮೂಲಕ ಹಸ್ತಪ್ರತಿಶಾಸ್ತ್ರದ ಸ್ವರೂಪವನ್ನು ವಿಶೇಷ ರೀತಿಯಲ್ಲಿ ಚರ್ಚಿಸಲಾಗಿದೆ.

* * * *

# ಅಡಿಟಿಪ್ಪಣಿಗಳು

1. ಹಸ್ತಪ್ರತಿಶಾಸ್ತ್ರ : ಅದರ ವಿವಿಧ ಮುಖಗಳು

   ಡಾ: ಎಂ.ಎಂ. ಕಲಬುರ್ಗಿ

   ಪುಟ – 23-24

2. ಕನ್ನಡ ಹಸ್ತಪ್ರತಿಶಾಸ್ತ್ರ

   ಡಾ: ಎಂ.ಎಂ. ಕಲಬುರ್ಗಿ

   ಪುಟ – 2

3. ಹಸ್ತಪ್ರತಿಗಳ ಪರಿಚಯ

   ಬಿ.ಸ್. ಸಣ್ಣಯ್ಯ

   ಪುಟ-1

4. ಕನ್ನಡ ಗ್ರಂಥ ಸಂಪಾದನೆ

   ಪುಟ: 31-44

5. ಗ್ರಂಥಸಂಪಾದನಶಾಸ್ತ್ರ ಪರಿಚಯ

   ಎಸ್.ಎಂ. ಕತ್ರೆ

   ಪುಟ: 2-15

6. ಕನ್ನಡ ಹಸ್ತಪ್ರತಿಗಳ ಇತಿಹಾಸ

   ಎಚ್. ದೇವಿರಪ್ಪ

   ಪುಟ: 9-16

7. ಕನ್ನಡ ಹಸ್ತಪ್ರತಿಶಾಸ್ತ್ರ

   ಡಾ: ಎಂ.ಎಂ. ಕಲಬುರ್ಗಿ

   ಪುಟ – 9

8. ಮೈಸೂರು ಹಸ್ತಪ್ರತಿ ಸೂಚಿ-1

   ಪೀಠಿಕೆ – X

9. ಕನ್ನಡ ಗ್ರಂಥಸಂಪಾದನಶಾಸ್ತ್ರ

   ಡಾ: ಎಂ.ಎಂ. ಕಲಬುರ್ಗಿ

10. ಕನ್ನಡ ಹಸ್ತಪ್ರತಿಶಾಸ್ತ್ರ

ಡಾ: ಎಂ.ಎಂ. ಕಲಬುರ್ಗಿ

ಪುಟ : 15

11. ಕನ್ನಡ ಹಸ್ತಪ್ರತಿಶಾಸ್ತ್ರ

ಡಾ: ಎಂ.ಎಂ. ಕಲಬುರ್ಗಿ

12. ಕನ್ನಡ ಗ್ರಂಥಸಂಪಾದನೆ

ಡಿ.ಎಲ್.ಎನ್.

13. ಕನ್ನಡ ಹಸ್ತಪ್ರತಿಗಳ ಇತಿಹಾಸ

ಎಚ್. ದೇವಿರಪ್ಪ

ಪುಟ: 15-16

14. ಮಹಾಮಾರ್ಗ

ಅಭಿನಂದನಾ ಗ್ರಂಥ

ಪುಟ : 814

15. ಕನ್ನಡ ಹಸ್ತಪ್ರತಿಶಾಸ್ತ್ರ

ಡಾ: ಎಂ.ಎಂ. ಕಲಬುರ್ಗಿ

ಪುಟ – 44

ನಾಗರಭಾವಿ ಶಾಸನ 1058

16. ಕನ್ನಡ ಹಸ್ತಪ್ರತಿಶಾಸ್ತ್ರ

ಡಾ: ಎಂ.ಎಂ. ಕಲಬುರ್ಗಿ

ಪುಟ: 47

17. ಹಸ್ತಪ್ರತಿಗಳ ಪರಿಚಯ

ಪುಟ : 33

18. ಕನ್ನಡ ಹಸ್ತಪ್ರತಿಶಾಸ್ತ್ರ

ಡಾ: ಎಂ.ಎಂ. ಕಲಬುರ್ಗಿ

ಪುಟ : 88

ಅಧ್ಯಾಯ – 5

# ಹಸ್ತಪ್ರತಿಶಾಸ್ತ್ರದ ಅಧ್ಯಯನದ ಸಾಧ್ಯತೆಗಳು

ಭಾರತದಲ್ಲಿ ಇದುವರೆಗೂ ದೊರೆತ ಹಸ್ತಪ್ರತಿಗಳಲ್ಲಿ ಒಂದೂ 10ನೇ ಶತಮಾನಕ್ಕಿಂತ ಹಿಂದಿನದಲ್ಲ: ಹೆಚ್ಚಾಗಿ 13ನೆಯ ಶತಮಾನಕ್ಕಿಂತ ಇತ್ತೀಚೆಗೆ ದೊರೆತ ಹಸ್ತಪ್ರತಿಗಳು– ಇವುಗಳ ಅಧ್ಯಯನದ ಸಾಧ್ಯತೆಗಳು ಎಷ್ಟರಮಟ್ಟಿಗೆ ಇದೆ ಎಂಬುದನ್ನು ಇಲ್ಲಿ ಚರ್ಚಿಸಲಾಗುವುದು. ಹಸ್ತಪ್ರತಿಗಳಲ್ಲಿ [1]"ಕನ್ನಡದ ತ್ರಿಪದಿ, ಸಾಂಗತ್ಯ, ಷಟ್ಪದಿ, ಕೀರ್ತನೆ, ಸ್ವರವಚನ, ತತ್ವಪದ– ಇವೆಲ್ಲಾ ಗೇಯ ಪ್ರಧಾನವಾದ ಪ್ರಕಾರಗಳು. ಕನ್ನಡ ಸಂಸ್ಕೃತಿ ತನ್ನ ತೋಡೀತನದ ಈಡೇರಿಕೆಗಾಗಿ ರೂಪಿಸಿಕೊಂಡ ಭಿನ್ನ ಮಟ್ಟುಗಳು. ಇವುಗಳ ಗುಣವೇ ಗೇಯಸ್ವರೂಪದ್ದು. ಪಲ್ಲವಿ, ರಾಗ, ತಾಳ, ಸೂಚಿತ ಈ ಪ್ರಕಾರಗಳು ಒಂದು ಹಾಡಿನ ಪರಂಪರೆಯನ್ನು, ಸಾಹಿತ್ಯ ಪರಂಪರೆಯನ್ನು ಜೀವಂತವಾಗಿಟ್ಟುಕೊಂಡು ಬಂದಿವೆ."[1] ಇವುಗಳ ಬಗೆಗೆ ಹೆಚ್ಚಿನ ಅಧ್ಯಯನ ಹಾಗೂ ಪ್ರಕಟಣೆಗಳು ಇಂದು ಅತ್ಯಾವಶ್ಯಕವೆನಿಸುತ್ತದೆ. ಹಸ್ತಪ್ರತಿಗಳಲ್ಲಿ [2]"ಲೌಕಿಕ ಶಾಸ್ತ್ರಗಳೆಂಬುವ ಭೌತ, ರಾಸಾಯನಿಕ, ಖಗೋಳೀಯ ಮೊದಲಾದವುಗಳಂತೆ ಬಾಹ್ಯ ಪ್ರಪಂಚದ ವಸ್ತುಗಳನ್ನು ಕುರಿತು ವಿಚಾರ ಮಾಡತಕ್ಕವು ಅಥವಾ ಅರ್ಥಶಾಸ್ತ್ರ, ವ್ಯವಹಾರಶಾಸ್ತ್ರ, ರಾಜ್ಯಮೀಮಾಂಸೆ – ಮೊದಲಾದವುಗಳಂತೆ ಸಮಾಜ ವ್ಯವಸ್ಥೆಗಳನ್ನು ಕುರಿತು ವಿಚಾರ ಮಾಡತಕ್ಕವು"[2] ಎಂದು ಡಿ.ವಿ.ಜಿ.ಯವರು ಗುರುತಿಸಿದರೆ ಎಂ.ವಿ.ಸೀ. ಅವರು [3]"ಕಾಮ, ಅರ್ಥ– ಈ ಫಲಸಿದ್ಧಿಗಳನ್ನು ಕೊಡತಕ್ಕವು ಲೌಕಿಕ ಶಾಸ್ತ್ರಗಳೆಂದು ಪ್ರಾಚೀನರ ದೃಷ್ಟಿಯಿಂದ ನಾವು ವಿವರಿಸಬಹುದು."[3] ಲೌಕಿಕಶಾಸ್ತ್ರದ ಹಸ್ತಪ್ರತಿಗಳ ಅಧ್ಯಯನದಿಂದ ಅಂದರ, ವೈದ್ಯಶಾಸ್ತ್ರ ಹಸ್ತಪ್ರತಿಗಳಿಂದ ವೈದ್ಯವಿಶಾರದರು ಅಧ್ಯಯನ ನಡೆಸುವುದು ಅಗತ್ಯ. ಪಾಕಶಾಸ್ತ್ರಕ್ಕೆ ಸಂಬಂಧಿಸಿದ ಹಸ್ತಪ್ರತಿಗಳ ಅಧ್ಯಯನದಿಂದ ಗೃಹಿಣಿಯರು ಹೊಸ ರುಚಿಗಳನ್ನು ರೂಢಿಗೆ ತರಬಹುದು. ಜೋತಿಷ್ಯ – ಶಕುನಗಳಂತಹ ಹಸ್ತಪ್ರತಿಗಳ ಅಧ್ಯಯನ, ಅಶ್ವವೈದ್ಯ, ಗೋವೈದ್ಯಗಳನ್ನು ಅಧ್ಯಯನ ಮಾಡಲು ಹೊಸಗನ್ನಡದಲ್ಲಿ ಈ ಹಸ್ತಪ್ರತಿಗಳ ವಿಷಯಗಳನ್ನು ಅನುವಾದ ಮಾಡಿ ಪ್ರಕಟಿಸಿದರೆ ಹಸ್ತಪ್ರತಿಗಳ ಅಧ್ಯಯನ ಸುಲಭವಾಗುತ್ತದೆ. ಹಸ್ತಪ್ರತಿಗಳು ವಿಷಯ ದೃಷ್ಟಿಯಿಂದ ವೈವಿಧ್ಯಮಯವಾಗಿವೆ. ಸಾಹಿತ್ಯ ಗ್ರಂಥಗಳು ಸಾಕಷ್ಟು ಪ್ರಚಾರದಲ್ಲಿವೆಯಾದರೂ ಸಂಗೀತ, ವೈದ್ಯ, ಆಯುರ್ವೇದ, ಧರ್ಮ, ಜ್ಯೋತಿಷ್ಯ, ತಂತ್ರ–ಮಂತ್ರ, ಭವಿಷ್ಯ, ಗಣಿತ, ಭೂಗೋಳ, ಖಗೋಳ, ಧರ್ಮಶಿಕ್ಷಣ, ಬಾಲಬೋಧೆ, ಇತಿಹಾಸ, ದಿನಚರಿ, ಶಾಸ್ತ್ರ – ಮುಂತಾಗಿ ಹಲವು ವಿಷಯಗಳ ವ್ಯಾಪ್ತಿಯನ್ನು

ಒಳಗೊಂಡಿವೆ. ಇವುಗಳು ಭಾಷೆ, ಧರ್ಮ, ಸಂಸ್ಕೃತಿ, ಸಾಹಿತ್ಯದಂತಹ ಸಾಮಾಜಿಕ ಮೌಲ್ಯಗಳನ್ನು ಒಳಗೊಂಡಿವೆ. ಈ ವಿಷಯಗಳನ್ನೊಳಗೊಂಡ ಹಸ್ತಪ್ರತಿಗಳ ಅಧ್ಯಯನ ಮಾಡುವುದರಿಂದ ಸಮಾಜದ ಪ್ರತಿಯೊಂದು ಸ್ತರವನ್ನು ತಿಳಿದುಕೊಂಡಂತಾಗುತ್ತದೆ. ಈ ವಿಷಯವಾರು ವಿಂಗಡಣೆಯ ಮೂಲಕ ಹಸ್ತಪ್ರತಿಶಾಸ್ತ್ರದ ಬಹುಮುಖ ಅಧ್ಯಯನ ಸಾಧ್ಯವಾಗುತ್ತದೆ.

1. ಭಾಷಿಕ ಅಧ್ಯಯನ: ಹಸ್ತಪ್ರತಿಗಳಲ್ಲಿ ದೊರೆಯುವ ಬರವಣಿಗೆಯ ವೈಶಿಷ್ಟ್ಯಗಳನ್ನು, ಪ್ರಾದೇಶಿಕತೆಯನ್ನು ತಿಳಿಯುವುದರ ಮೂಲಕ ಸಂಶೋಧನೆ ನಡೆಸಿ ಭಾಷಿಕ ಅಧ್ಯಯನ ಸಾಧ್ಯವಾಗುತ್ತದೆ. ಸಂಸ್ಕೃತ, ತೆಲುಗು, ತಮಿಳು, ಕನ್ನಡ – ಮುಂತಾದ ಭಾಷೆಗಳು ಹಸ್ತಪ್ರತಿಗಳಲ್ಲಿ ಸಿಗುವುದರಿಂದ ಆಯಾ ಪ್ರದೇಶದ ಭಾಷೆಗಳು ಯಾವುದು ಎಂಬುದು ಅಧ್ಯಯನದ ವ್ಯಾಪ್ತಿಗೆ ಒಳಪಡುತ್ತದೆ.

2. ಸಾಮಾಜಿಕ ಅಧ್ಯಯನ : ಹಸ್ತಪ್ರತಿಗಳಲ್ಲಿ ಕಂಡುಬರುವ ನಂಬಿಕೆಗಳು, ಆಚರಣೆಗಳು, ಒಗಟು, ಗಾದೆಗಳನ್ನೊಳಗೊಂಡ ಸಾಮಾಜಿಕ ಸಂಗತಿಗಳನ್ನು ತಿಳಿಯುವುದರಿಂದ ಒಂದು ಪ್ರದೇಶದ, ಅಲ್ಲಿನ ಜನರ ಸಾಮಾಜಿಕ ಜೀವನದ ಅಧ್ಯಯನ ಸಾಧ್ಯವಾಗುತ್ತದೆ.

3. ಐತಿಹಾಸಿಕ ಅಧ್ಯಯನ: ಐತಿಹಾಸಿಕ ಮೌಲ್ಯದ ಹಸ್ತಪ್ರತಿಗಳನ್ನು ಸಂಶೋಧನೆಗೆ ಒಳಪಡಿಸಿದ್ದಾದರೆ, ಇತಿಹಾಸದ ಅಧ್ಯಯನ ಸಾಧ್ಯವಾಗುತ್ತದೆ. ಶಾಸನಗಳು, ರಾಜಚರಿತ್ರೆಗಳು ಮುಂತಾದವುಗಳು ಒಂದು ನಾಡಿದ ಇತಿಹಾಸದ ಅಧ್ಯಯನಕ್ಕೆ ನೆರವಾಗುತ್ತವೆ. ಅದೇ ರೀತಿ ಕೆಲವು ಹಸ್ತಪ್ರತಿಗಳು ಈ ಬಗೆಯ ಮಾಹಿತಿ ನೀಡುತ್ತವೆ. ಉದಾ: [4]"1) ವೇಣುಪುರದ ಕ್ಷತ್ರಿಯ ವಂಶಾವಳಿ, 2) ಹೊಳೆಹೊನ್ನೂರು ಕೈಫಿಯತ್ತು, 3) ಹೊಯ್ಸಳ ರಾಜರ ಚರಿತ್ರೆ"[4] ಇತ್ಯಾದಿಗಳನ್ನು ಅಧ್ಯಯನ ಮಾಡುವ ಮೂಲಕ ಐತಿಹಾಸಿಕ ಅಧ್ಯಯನ ಸಾಧ್ಯವಾಗುತ್ತದೆ.

4. ಸಾಮಾಜಿಕ ಮೌಲ್ಯಗಳ ಅಧ್ಯಯನ : ಹಸ್ತಪ್ರತಿಗಳಲ್ಲಿ ವ್ಯಕ್ತಿ ಚಿತ್ರಣ, ಬರವಣಿಗೆ ಶೈಲಿ ಮುಂತಾದವುಗಳನ್ನು ತಿಳಿಯುವ ಮೂಲಕ ಸಾಮಾಜಿಕ ಮೌಲ್ಯಗಳ ಅಧ್ಯಯನದ ಸಾಧ್ಯತೆಯಿದೆ. ಉದಾ: ಸಭಾಪತಿಯ ಲಕ್ಷಣ ಹೇಳುವ ಹಸ್ತಪ್ರತಿಯನ್ನು ನೋಡುವುದಾದರೆ –

[5]" ಬಾವಕ ರಸಿಕರಸ । ಭಾವನೆ ನೆರಉಳ್ಳ ರಾಯಭಾರಿಗಳಂ ।
ಕೋವಿದರಕರಸಿ ನಿಯತಾ । ಸ್ಥಾನದೊಳಿರಿಸೂದು

ತತ್ಸಭಾಪತಿ ಧರೆಯೋಳ್॥"[5]

[6]" ಎಂಟಡಿಯ ತಾಯಂಗೆ ।
ಕಂಟಕಗೈದವನ ಬಾಯತುತ್ತಿಗೆ ಮುನಿದನ
ನೆಂಟರ ಬಗೆಯನಾಳ್ದನ ।
ಭಂಟನ ತಾ ಪೋಲ್ದನಕ್ಕ ರಾತ್ರಿಯ ನಲ್ಲಂ ॥"[6]

ತಂಗಿ ಅಕ್ಕನಿಗೆ ರಾತ್ರಿ ವೇಳೆಯಲ್ಲಿ ಬಾಗಿಲು ತಟ್ಟುತ್ತಿದ್ದ ವಿಟರ ಬಗೆಗೆ ವರ್ಣಿಸುವ ಪದ್ಯ. ಇವುಗಳ ಅಧ್ಯಯನದಿಂದ ವೇಶ್ಯೆಯರು ಬದುಕುತ್ತಿದ್ದ ನಿಯಮಗಳು, ವಿಟರೊಡನೆ ವ್ಯವಹರಿಸುತ್ತಿದ್ದ ರೀತಿ-ನೀತಿಗಳು, ಸಮಾಜದ ಜನ ಅವರನ್ನು ಕಾಣುತ್ತಿದ್ದ ರೀತಿ, ಅವರಿಗೂ ಸಮಾಜಕ್ಕೂ ಇದ್ದ ಸಂಬಂಧ – ಇವುಗಳನ್ನೆಲ್ಲಾ ತಿಳಿಯುವ ಮೂಲಕ ಅವರ (ವೇಶ್ಯೆ) ಬದುಕನ್ನು ಆಮೂಲಾಗ್ರವಾಗಿ ಅಧ್ಯಯನ ನಡೆಸಬಹುದು. ಅನೇಕ ಹಸ್ತಪ್ರತಿಗಳಿಂದ ಸಾಮಾಜಿಕ ಮೌಲ್ಯಗಳ ಅಧ್ಯಯನ ಸಾಧ್ಯವಾಗುತ್ತದೆ.

5. ಸಾಹಿತ್ಯ ವಿಮರ್ಶೆಯ ಅಧ್ಯಯನ: ಪ್ರತಿಯೊಂದು ಹಸ್ತಪ್ರತಿಗೂ ಅನೇಕ ಪ್ರತಿಯ ನಕಲುಗಳು ಸಿಗುತ್ತದೆ. ಆ ನಕಲುಗಳ ಸಂಖ್ಯೆ, ಸ್ವಭಾವ, ಪ್ರದೇಶ ಆಧಾರದಿಂದ ಆಯಾ ಕೃತಿಗಳ ಓದುಗರ ಸ್ವಭಾವ, ಕವಿಗಳ ಸ್ವಭಾವ ಮುಂತಾದವುಗಳ ಸ್ವರೂಪವನ್ನು ಗುರ್ತಿಸುವಲ್ಲಿ ಹಸ್ತಪ್ರತಿಗಳಿಂದ ಸಾಹಿತ್ಯದ ವಿಮರ್ಶೆಯ ಅಧ್ಯಯನದ ಸಾಧ್ಯತೆಗಳಿವೆ.

6. ಸಮಾಜೋ ಸಾಂಸ್ಕೃತಿಕ ಅಧ್ಯಯನ: ಅನೇಕ ಹಸ್ತಪ್ರತಿಗಳಲ್ಲಿ ದೊರಕುವ ವ್ಯಕ್ತಿನಾಮ, ಸ್ಥಳನಾಮಗಳು, ಲಿಪಿ, ಭಾಷೆಗಳ ವೈವಿಧ್ಯತೆಗಳನ್ನು ತಿಳಿಯುವ ಮೂಲಕ ಆಯಾ ಸಮಾಜಗಳ ಸಾಂಸ್ಕೃತಿಕ ಒಡನಾಟಗಳ ಅಧ್ಯಯನ ಸಾಧ್ಯವಾಗುತ್ತದೆ.

ಹಸ್ತಪ್ರತಿಶಾಸ್ತ್ರ ಅಧ್ಯಯನ ಕಕ್ಷೆಯನ್ನು ಈ ಕೆಳಕಂಡಂತೆ 4 ಹಂತಗಳಾಗಿ ಗುರುತಿಸಿಕೊಂಡು ಆ ಮೂಲಕ ಅಧ್ಯಯನದ ಸಾಧ್ಯತೆಗಳನ್ನು ನಡೆಸಬಹುದು.

1. ಹಸ್ತಪ್ರತಿ ಸಂಗ್ರಹಣ, 2. ಸೂಚೀಕರಣ, 3. ವರ್ಗೀಕರಣ, 4. ಶಾಸ್ತ್ರ ನಿರ್ಮಾಣ.

ಇಂದು ಮುದ್ರಿತ ಪುಸ್ತಕಗಳ ಸೌಲಭ್ಯದಿಂದಾಗಿ ಹಸ್ತಪ್ರತಿಗಳಲ್ಲಿಯ ಜ್ಞಾನದ ಬಗೆಗಾಗಲಿ, ಹಸ್ತಪ್ರತಿಶಾಸ್ತ್ರದ ಬಗೆಗಾಗಲಿ ಜನರಲ್ಲಿ ಆಸಕ್ತಿಯಿಲ್ಲ. ವಿದ್ವಾಂಸರುಗಳಲ್ಲಿ ಹಸ್ತಪ್ರತಿಗಳನ್ನು ಓದುವವರ ಸಂಖ್ಯೆ ಕ್ಷೀಣಿಸುತ್ತಿದೆ. ನಾಗವರ್ಮನ 'ವರ್ಧಮಾನ ಪುರಾಣ', ಚೌಂಡರಸನ 'ನಳಚರಿತೆ', ಮಧುರನ 'ಧರ್ಮನಾಥ ಪುರಾಣ', ಮಹಾಲಿಂಗಸ್ವಾಮಿಯ

'ಬಾಲರಾಮನ ಸಾಂಗತ್ಯ', ಲಿಂಗಣಾರಾಧ್ಯನ ವೃತ್ತಿಯನ್ನೊಳಗೊಂಡ ಶಬ್ದಮಣಿದರ್ಪಣಗಳಂಥ ಪ್ರಸಿದ್ಧ ಕೃತಿಗಳು ಏಕರೂಪದಲ್ಲಿ ಸಿಗುತ್ತವೆ. ಹಸ್ತಪ್ರತಿಗಳ ಅಧ್ಯಯನಕಾರರು ಇವುಗಳನ್ನು ದ್ವಿಪ್ರತಿಗಳಾಗಿ ಮಾಡಿ ಮುಂದಿನ ಅಧ್ಯಯನಕಾರರಿಗೆ ಮಾರ್ಗದರ್ಶನ ನೀಡುವಂತಾಗಬೇಕು.

ಇಂದು ಆಧುನಿಕ ಸಾಹಿತ್ಯದಿಂದ ಪ್ರಾಚೀನ ಸಾಹಿತ್ಯವನ್ನೊಳಗೊಂಡ ಹಸ್ತಪ್ರತಿಗಳು, ಅವುಗಳ ಅಧ್ಯಯನ, ಪರಿಷ್ಕರಣ ತೀರಾ ಅಲಕ್ಷ್ಯಕ್ಕೆ ಗುರಿಯಾಗಿದೆ. 'ಹರಿಶ್ಚಂದ್ರ ಕಾವ್ಯ', 'ಜೈಮಿನಿ ಭಾರತ'ಗಳಂಥ ಕೃತಿಗಳು ಅನೇಕ ಆವೃತ್ತಿಗಳಾಗಿ ಪ್ರಕಟಗೊಂಡಿವೆ. ಅವುಗಳ ಹಸ್ತಪ್ರತಿಗಳ ಅಧ್ಯಯನಗಳು (ಪಿ.ಎಚ್.ಡಿ, ಎಂ.ಫಿಲ್ ಸಂಶೋಧನೆಗಳು) ನಡೆಯುತ್ತಿದೆ. ಆದರೆ, ಸಾಹಿತ್ಯೇತರ ಕೃತಿಗಳಾದ ವೈದ್ಯಶಾಸ್ತ್ರ, ಕೃಷಿಶಾಸ್ತ್ರ, ಜ್ಯೋತಿಷ್ಯಶಾಸ್ತ್ರಗಳಂತಹ ಶಾಸ್ತ್ರ ಕೃತಿಗಳೂ ಟೀಕೆ, ವ್ಯಾಖ್ಯಾನ ಗ್ರಂಥಗಳು ಹಸ್ತಪ್ರತಿಗಳಲ್ಲಿಯೇ ಕೊಳೆಯುತ್ತ ಬಿದ್ದಿವೆ. ಅಂತಹ ಹಸ್ತಪ್ರತಿಗಳ ಅಧ್ಯಯನ ಕೈಗೊಂಡು ಮುದ್ರಣಕ್ಕೆ ಒಳಪಡಿಸಬೇಕು. ಡಾ: ಕಲಬುರ್ಗಿಯವರು ಸೂಚಿಸಿದಂತೆ ಕರ್ನಾಟಕದ ಎಲ್ಲ ಸ್ನಾತಕೋತ್ತರ ವಿಭಾಗಗಳು ಈ ಕೆಲಸವನ್ನು ಹಂಚಿಕೊಂಡು ಒಂದು ಯೋಜನೆ ರೂಪಿಸಿ, ಅನೇಕ ಹಸ್ತಪ್ರತಿಗಳು ನಾಶವಾಗುವ ಮುನ್ನ ಸಾವಿರ ಪ್ರತಿಗಳಿಗೆ ಬದಲು ಐದು ನೂರು ಪ್ರತಿಗಳನ್ನಾದರೂ ಮುದ್ರಿಸಿ ಪ್ರಕಟಿಸಬೇಕೆಂದು ನೀಡಿದ ಸಲಹೆ ಸ್ವೀಕಾರಾರ್ಹವೆಂದು ಹೇಳಬಹುದು. ಈ ಸಂಶೋಧನ ಫಲವಾಗಿ ಪ್ರಕಟಗೊಂಡ ಪ್ರತಿಗಳಿಂದ ಮುಂದಿನ ಸಂಶೋಧಕರಿಗೆ ಹಸ್ತಪ್ರತಿಶಾಸ್ತ್ರದ ಬಗೆಗೆ ಮಾಹಿತಿ ಲಭ್ಯವಾಗಿ ಅಧ್ಯಯನಕ್ಕೆ ಅನುಕೂಲವಾಗುತ್ತದೆ.

[7]"ಶಿಲ್ಪಕಲೆ, ಚಿತ್ರಕಲೆಗಳಂತೆ ಹಸ್ತಪ್ರತಿ ಕಲೆಗಳೂ ವೈವಿಧ್ಯಮಯವಾಗಿವೆ. ರೇಖಾ ಚಿತ್ರಗಳು, ವರ್ಣಚಿತ್ರಗಳ ಜೊತೆಗೆ ಧಾರ್ಮಿಕ ಮತ್ತು ಅಧಾರ್ಮಿಕ ಚಿತ್ರಗಳು ವಿಫುಲವಾಗಿವೆ. ಬರವಣಿಗೆ, ಅದಕ್ಕೆ ಮಾಡಿಕೊಂಡಿರುವ ಸಾಮಗ್ರಿಯ ಸಿದ್ಧತೆ; ಅಲಂಕಾರವೇ ಒಂದು ಕಲೆಯಾದರೂ ಬರೆದಿರುವ ಶೈಲಿ, ಬಿಡಿಸಿರುವ ಚಿತ್ರಗಳ ಕಲೆಗಾರಿಕೆಯೂ ಅದ್ವತೀಯವಾದುದು. ಚಿತ್ರಸಂಪುಟವಾಗಿಯೇ ಸಿದ್ಧವಾಗಿರುವ 'ಶ್ರೀತತ್ವನಿಧಿ' ಓಲೆಗರಿಯಲ್ಲಿ ಮಸಿ – ಲೇಖನಿಯಿಂದ ಬರೆದಿರುವ ವರ್ಣಚಿತ್ರಗಳಿಂದ ಕೂಡಿರುವ 'ಧವಳ' ಗ್ರಂಥಗಳಂತಹ ಅಪರೂಪದ ಹಸ್ತಪ್ರತಿಗಳು ಸಾಕಷ್ಟಿವೆ."[7] ಹಸ್ತಪ್ರತಿಗಳು ಬರವಣಿಗೆಯ ಸಾಮಗ್ರಿಗಳಾಗಿದ್ದರೂ ಅವುಗಳ ಅಧ್ಯಯನ ಮುಖಾಂತರ ಸಾಸ್ಕೃತಿಕ ಅಧ್ಯಯನ ನಡೆಯುತ್ತದೆ.

ಹಸ್ತಪ್ರತಿ ಭಂಡಾರಗಳಲ್ಲಿರುವ ಬೇಕಾದ ಗ್ರಂಥಗಳನ್ನು 'ಮೈಕ್ರೋ ಫಿಲಂ' ಮಾಡಿ ದಾಖಲಿಸುವ ಮೂಲಕ ಹಸ್ತಪ್ರತಿಶಾಸ್ತ್ರದ ಅಧ್ಯಯನ ಸಾಧ್ಯವಾಗುತ್ತದೆ. ಕಂಪ್ಯೂಟರ್ ಮೂಲಕ ಹಸ್ತಪ್ರತಿಗಳನ್ನು ದಾಖಲೀಕರಿಸಿ, 'ಸ್ಕ್ಯಾನಿಂಗ್' ವ್ಯವಸ್ಥೆಯ ಮೂಲಕ ಅನೇಕ ಪ್ರತಿಗಳಾಗಿ ಬಳಸಿದಾಗ ಹಸ್ತಪ್ರತಿಶಾಸ್ತ್ರದ ಬೆಳವಣಿಗೆ ಮುಂದುವರೆಯುತ್ತದೆ.

ಸರ್ಕಾರದ ಮೂಲಕ ಹಸ್ತಪ್ರತಿಶಾಸ್ತ್ರದ ಅಧ್ಯಯನದ ಸಾಧ್ಯತೆಗಳು ಹೆಚ್ಚಿದೆ.

1. ಹಸ್ತಪ್ರತಿ ಇಲಾಖೆಗಳ ಸ್ಥಾಪನೆ
2. ಕ್ಷೇತ್ರಕಾರ್ಯ ಮುಖಾಂತರ ಹಸ್ತಪ್ರತಿಗಳ ಸಂಗ್ರಹ
3. ಹಸ್ತಪ್ರತಿಶಾಸ್ತ್ರದಲ್ಲಿ ತರಬೇತಿ ಶಾಲೆಗಳನ್ನು ನಡೆಸುವುದು. ಉದಾ: ಅ) ಬಿ.ಎಂ.ಶ್ರೀ ಪ್ರತಿಷ್ಠಾನ. ಆ) ಹಂಪಿ ವಿಶ್ವವಿದ್ಯಾನಿಲಯ. ಇ) ಕೇಂದ್ರ ಪತ್ರಾಗಾರ ಇಲಾಖೆ.
4. ಸ್ನಾತಕೋತ್ತರ ತರಗತಿಗಳಲ್ಲಿ ಜನಪದ, ಭಾಷಾಶಾಸ್ತ್ರ, ಶಾಸನಗಳಂತೆ ಹಸ್ತಪ್ರತಿಶಾಸ್ತ್ರಕ್ಕೂ ಮನ್ನಣೆ ನೀಡುವುದು.
5. ಹಸ್ತಪ್ರತಿಶಾಸ್ತ್ರದ ಕೃತಿಗಳು, ಸಂಪ್ರಬಂಧಗಳು, ಮಹಾಪ್ರಬಂಧಗಳ ರಚನೆಗೆ ವಿದ್ವಾಂಸರುಗಳು ವಿದ್ಯಾರ್ಥಿಗಳ ಗಮನಸೆಳೆಯುವುದು, ಅವರಲ್ಲಿ ಹಸ್ತಪ್ರತಿಶಾಸ್ತ್ರದ ಬಗ್ಗೆ ಆಸಕ್ತಿ ಮೂಡುವಂತೆ ಮಾಡುವುದು.

ವಿದ್ವಾಂಸರುಗಳಿಂದ ರಚನೆಗೊಂಡ ಹಸ್ತಪ್ರತಿಶಾಸ್ತ್ರ ಗ್ರಂಥಗಳನ್ನು ಅಧ್ಯಯನ ಮಾಡುವುದರಿಂದ ಈ ಶಾಸ್ತ್ರದ ಅಧ್ಯಯನ ಸಾಧ್ಯವಾಗುತ್ತದೆ.

1. 'ಗ್ರಂಥಸಂಪಾದನೆ: ಪೂರ್ವ ವಿದ್ವಾಂಸರ ಕೊಡುಗೆ' ಈ ಕೃತಿಯಲ್ಲಿ ಬಿ.ಎಲ್. ರೈಸ್, ಕಿಟೆಲ್, ಆರ್. ನರಸಿಂಹಾಚಾರ್ ರವರುಗಳನ್ನೊಳಗೊಂಡ 15 ಜನ ವಿದ್ವಾಂಸರು ಈ ಕ್ಷೇತ್ರಕ್ಕೆ ಸಲ್ಲಿಸಿದ ಕೊಡುಗೆಯನ್ನು 2,4,6 ನೆಯ ಭಾಗಗಳು ಹಸ್ತಪ್ರತಿಶಾಸ್ತ್ರಕ್ಕೆ ಸಂಬಂಧಿಸಿದ ಅಧ್ಯಯನವಾಗಿದೆ.

2. ಬಿ.ಎಂ.ಶ್ರೀ ಪ್ರತಿಷ್ಠಾನ 1983 ರಲ್ಲಿ ಪ್ರಕಟಿಸಿದ 'ಹಸ್ತಪ್ರತಿಶಾಸ್ತ್ರ' ಕೃತಿಯ ಅಧ್ಯಯನ.

3. ಪ್ರೊ: ಎಂ.ವೀ.ಸೀ. ರವರ ಲೇಖನ ಮತ್ತು ಎಚ್. ದೇವಿರಪ್ಪನವರ ಕನ್ನಡ ಹಸ್ತಪ್ರತಿಗಳ ಚರಿತ್ರೆ.

4. ಡಾ: ಕಲಬುರ್ಗಿಯವರ 'ಹಸ್ತಪ್ರತಿಶಾಸ್ತ್ರ : ಅದರ ವಿವಿಧ ಮುಖಗಳು' ಎಂಬ ಲೇಖನದಲ್ಲಿ ಹಸ್ತಪ್ರತಿಯ ಉಗಮ-ವಿಕಾಸ, ಲೇಖನ ಸಾಮಗ್ರಿ-ಲಿಪಿಕಾರರು, ಭಾಷೆ-ಲಿಪಿ, ಚಿತ್ರ, ಸ್ಖಾಲಿತ್ಯ, ಸಂರಕ್ಷಣೆ, ಸದುಪಯೋಗ, ಸೂಚೀಕರಣ ಮುಂತಾದವುಗಳನ್ನು ಒಳಗೊಂಡ ಈ ಲೇಖನದಿಂದ ಹಸ್ತಪ್ರತಿಶಾಸ್ತ್ರದ ಅಧ್ಯಯನ ಸಾಧ್ಯವಾಗುತ್ತದೆ.

5. ಡಾ: ಕೆ. ಕೃಷ್ಣಮೂರ್ತಿಯವರ 'ಸಂಸ್ಕೃತದಲ್ಲಿ ಹಸ್ತಪ್ರತಿಶಾಸ್ತ್ರ ಮತ್ತು ಗ್ರಂಥಸಂಪಾದನೆ', ಶ್ರೀ ಎಸ್. ಶಿವಣ್ಣನವರ 'ಕನ್ನಡ ಹಸ್ತಪ್ರತಿ ಸೂಚಿಗಳು', ಇನ್ನೂ ಮುಂತಾದ ಗ್ರಂಥಗಳಿಂದ ಹಸ್ತಪ್ರತಿಶಾಸ್ತ್ರದ ಅಧ್ಯಯನಕ್ಕೆ ದಾರಿದೀಪವಾಗಿದೆ.

ಡಾ: ಕಲಬುರ್ಗಿಯವರು ಅನುಪಲಬ್ಧ ಕೃತಿಗಳ ಹಸ್ತಪ್ರತಿ ಇಲ್ಲದೆ ಅಪರೂಪ ಹಸ್ತಪ್ರತಿಗಳ ಶೋಧಕ್ಕೆ ನಿರಂತರ ಪ್ರಯತ್ನ ನಡೆಯಬೇಕು. 'ಕವಿರಾಜಮಾರ್ಗ' ಹಸ್ತಪ್ರತಿಯ ಸುಳಿವು ಹಿಡುದು ಬೀದರ್ ಜಿಲ್ಲೆಯಲ್ಲಿ ಅದನ್ನು ಪತ್ತೆಹಚ್ಚಲು ಹಾಗೂ ಧಾರವಾಡ ಪ್ರದೇಶದಲ್ಲಿ 'ಗಂಧಹಸ್ತಿ ಮಹಾಭಾಷ್ಯ' ಹಸ್ತಪ್ರತಿ ಇದೆ ಎಂಬ ವದಂತಿಯನ್ನು ಹಿಂಬಾಲಿಸುವ ಪ್ರಯತ್ನ ನಡೆಯಬೇಕು.

ಈ ಮಾತುಗಳನ್ನು ಗಮನಿಸುವುದಾದರೆ ಕಲಬುರ್ಗಿಯವರು ಹಸ್ತಪ್ರತಿಶಾಸ್ತ್ರದ ಅಧ್ಯಯನ ಎಷ್ಟು ಅವಶ್ಯ ಇದೆ ಎಂಬುದನ್ನು ಮನಗಂಡಿದ್ದಾರೆ. ಕಲಬುರ್ಗಿಯವರು ಹೇಳುವಂತೆ ಹಸ್ತಪ್ರತಿಶಾಸ್ತ್ರ ಬೆಳೆದು ಜಾಗತಿಕ ಪ್ರತಿಷ್ಠೆಯನ್ನು ತಂದುಕೊಟ್ಟು ಒಂದು ಅಧ್ಯಯನ ಕ್ಷೇತ್ರವಾಗಬೇಕಾದರೆ, ಹಸ್ತಪ್ರತಿ ಸಂಗ್ರಹಣ, ಸಂರಕ್ಷಣ, ಹಸ್ತಪ್ರತಿಶಾಸ್ತ್ರದ ಅಳವಡಿಕೆ, ಗ್ರಂಥಸಂಪಾದನಾ ಕಾರ್ಯ, ಯಂತ್ರೋಪಕರಣಗಳ ಬಳಕೆ, ಹಸ್ತಪ್ರತಿ ಭಂಡಾರದ ನವೀಕರಣ, ಹಸ್ತಪ್ರತಿ ಅಧ್ಯಯನದ ತರಬೇತಿ, ರಾಜ್ಯ ಹಸ್ತಪ್ರತಿ ಇಲಾಖೆಯ ಸ್ಥಾಪನೆ – ಈ ಕೆಲಸಗಳು ನಡೆಯುವ ಮೂಲಕ ಇಂದು ಹಸ್ತಪ್ರತಿಶಾಸ್ತ್ರಕ್ಕೆ ಮನ್ನಣೆ ಸಿಕ್ಕಿ ಅದರ ಅಧ್ಯಯನ ಸಾಧ್ಯವಾಗುತ್ತದೆ ಎಂದು ಉಲ್ಲೇಖಿಸಿದ್ದಾರೆ.

ಇಂದು ಕಂಪ್ಯೂಟರ್ ಯುಗವೆಂದು, ಹಳೆಯ ಹಸ್ತಪ್ರತಿಗಳ ಬಗೆಗಾಗಲಿ, ಹಸ್ತಪ್ರತಿಗಳ ಶೋಧನೆಗಾಗಲಿ ಬೆಲೆಯಿಲ್ಲವೆಂದು ಹೇಳುವಂತಹ ಸಾರ್ವಜನಿಕರಿಗೆ ಕಲಬುರ್ಗಿಯವರ ಹಸ್ತಪ್ರತಿಶಾಸ್ತ್ರ ಶೋಧನೆ ಪಾಠ ಕಲಿಸುವಂತಾಗಿದೆ. ಅವರ ಬಗೆಗೆ, ಅವರ ಸಂಶೋಧನೆಯ ಬಗೆಗೆ ಮಾಹಿತಿ ಸಿಕ್ಕಿ ನಮಗೂ ಹಸ್ತಪ್ರತಿಶಾಸ್ತ್ರದ ಬಗೆಗೆ ಆಸಕ್ತಿ ಮೂಡುವಂತಾಗುತ್ತದೆ. ಈ ನಿಟ್ಟಿನಲ್ಲಿ ಸರ್ಕಾರ ಕೆಲವೊಂದು ಸಂಘ ಸಂಸ್ಥೆಗಳು, ವಿಶ್ವವಿದ್ಯಾನಿಲಯಗಳು ಆಸಕ್ತಿವಹಿಸಬೇಕು. ಹಸ್ತಪ್ರತಿಶಾಸ್ತ್ರ ಎಂಬ ಪಠ್ಯವನ್ನು ಕಡ್ಡಾಯವಾಗಿ ಜಾರಿಗೆತರಬೇಕು. ಹಸ್ತಪ್ರತಿಶಾಸ್ತ್ರಕ್ಕೆ ಸಂಬಂಧಿಸಿದಂತೆ ಅನೇಕ ಗ್ರಂಥಗಳು ಇವೆಯಾದರೂ ಅದರ ಬೆಲೆ ಹೆಚ್ಚು. ಬಡ ವಿದ್ಯಾರ್ಥಿಗಳಿಗೆ ಸಂಶೋಧಕರಿಗೆ ಸಿಗುವಂತಹ ಬೆಲೆ ನಿಗದಿಪಡಿಸಬೇಕು. ಈ ರೀತಿ ಮಾಡುವ ಮೂಲಕ ಹಸ್ತಪ್ರತಿಶಾಸ್ತ್ರದ ಅಧ್ಯಯನ ಸಾರ್ಥಯವಾಗುತ್ತದೆ ಎಂದು ಹೇಳಬಹುದು.

ಹಸ್ತಪ್ರತಿಗಳ ಅಧ್ಯಯನವನ್ನು ಕೈಗೊಳ್ಳುವಂತಹ ಅಧ್ಯಯನಕಾರರಿಗೆ ಈ ಹಸ್ತಪ್ರತಿಗಳು ಈ ಕೆಳಕಂಡ ಪ್ರದೇಶಗಳಲ್ಲಿ ಸಿಗುತ್ತವೆ.

1) ಹಸ್ತಪ್ರತಿ ಭಂಡಾರ: ಮೈಸೂರಿನ ಪ್ರಾಚ್ಯ ಸಂಶೋಧನಾಲಯ, ಕನ್ನಡ ಅಧ್ಯಯನ ಸಂಸ್ಥೆ, ಅರಮನೆಯ ಹಸ್ತಪ್ರತಿ ಭಂಡಾರ.

2) ವಿಶ್ವವಿದ್ಯಾನಿಲಯ: ಮೈಸೂರು, ಧಾರವಾಡ, ಹಂಪಿ, ಮಂಗಳೂರು, ಬೆಂಗಳೂರು ಮುಂತಾದ ಕನ್ನಡ ವಿಭಾಗಗಳು.

3) ಜೈನ ಮಠಗಳು: ಕಾರ್ಕಳ, ಶ್ರವಣಬೆಳಗೊಳ, ವರಾಂಗ, ಮೂಡಬಿದರೆ.

4) ವೀರಶೈವ ಮಠಗಳು: ಚಿತ್ರದುರ್ಗ, ಬಳ್ಳಾರಿ, ಗದಗ, ಕೆಳದಿ, ಧರ್ಮಸ್ಥಳ, ಬೆಂಗಳೂರು.

5) ವೈದಿಕ ಮಠಗಳು: ಶೃಂಗೇರಿ, ಉಡುಪಿ ಮುಂತಾದ ಸಂಘ ಸಂಸ್ಥೆಗಳಲ್ಲಿ ಹಸ್ತಪ್ರತಿಗಳ ನಿಕ್ಷೇಪಗಳಿವೆ. (ಎನ್. ಅನಂತರಂಗಾಚಾರ್: ಕನ್ನಡ ಗ್ರಂಥಗಳ ಸಂಪಾದನೆ ಅಥವಾ ಸಂಸ್ಕರಣ)

ಕರ್ನಾಟಕದ ಹೊರಗೆ ಆರಾ ಜೈನ ಸಿದ್ಧಾಂತ ಭವನ, ಪುಣೆ ಭಂಡಾರ್ಕರ್ ಪ್ರಾಚ್ಯ ಸಂಶೋಧನಾಲಯ, ಬಿಹಾರ – ಅರಾ ಪ್ರಾಂತ್ಯದ ಜೈನ ಸಿದ್ದಾಂತ ಭವನ, ಸರಸ್ವತಿ ಮಹಲ್ ಗ್ರಂಥ ಭಂಡಾರ, ಲಂಡನ್ನಿನ ಇಂಡಿಯಾ ಆಫೀಸ್ ಲೈಬ್ರರಿ - ಮುಂತಾದ ಕಡೆ ಹಸ್ತಪ್ರತಿಗಳು ಸಂಗ್ರಹಗೊಂಡಿದ್ದು ಅಲ್ಲಿನ ಕ್ಷೇತ್ರಕಾರ್ಯದ ಮುಖಾಂತರ ಹಸ್ತಪ್ರತಿಶಾಸ್ತ್ರದ ಅಧ್ಯಯನದ ಸಾಧ್ಯತೆಗಳಿವೆಯೆಂದು ಹೇಳಬಹುದು.

* * * *

# ಅಡಿಟಿಪ್ಪಣಿಗಳು

1. ಕನ್ನಡ ಹಸ್ತಪ್ರತಿಗಳ ಬಹುಪಠ್ಯೀಯ ನೆಲೆಗಳು
   ಡಾ: ವೀರೇಶ ಬಂಡಿಗೇರ
   ಪುಟ: 164
2. ಜೀವನ ಸೌಂದರ್ಯ ಮತ್ತು ಸಾಹಿತ್ಯ
   ಡಿ.ವಿ.ಜಿ.
   ಪುಟ : 181
3. ಶಾಸ್ತ್ರ ಸಾಹಿತ್ಯ
   ಎಂ.ವಿ. ಸೀತಾರಾಮಯ್ಯ
   ಪುಟ : 268
4. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿಯಿಂದ ಆರಿಸಲಾಗಿದೆ.
5. ಹಸ್ತಪ್ರತಿಶಾಸ್ತ್ರ ವಿವೇಚನೆ
   ನಾ. ಗೀತಾಚಾರ್ಯ
   ಪುಟ : 8
6. ಹಸ್ತಪ್ರತಿಶಾಸ್ತ್ರ ವಿವೇಚನೆ
   ನಾ. ಗೀತಾಚಾರ್ಯ
   ಪುಟ : 8-9
7. ಹಸ್ತಪ್ರತಿಶಾಸ್ತ್ರ ವಿವೇಚನೆ
   ನಾ. ಗೀತಾಚಾರ್ಯ
   ಪುಟ : 36-37

ಅಧ್ಯಾಯ – 6

# ಸಮಾರೋಪ

ಹಸ್ತಪ್ರತಿಗಳು ಕಾವ್ಯವಾಗಿ ರಸಾನುಭೂತಿಯನ್ನುಂಟು ಮಾಡಿದಂತೆ, ಶಾಸ್ತ್ರವಾಗಿ ತಿಳುವಳಿಕೆಯನ್ನುಂಟು ಮಾಡಿದೆ. ಈ ಹಸ್ತಪ್ರತಿಗೆ ಒಂದು ಶಾಸ್ತ್ರರೂಪ ಕೊಟ್ಟಂತಹ ಕಲಬುರ್ಗಿಯವರ ಸಾಧನೆ ಅಮೋಘವಾದುದು. ಕಲಬುರ್ಗಿಯವರು ಬಹುಮುಖಿಯಾದ ಹವ್ಯಾಸದೊಂದಿಗೆ ಅಂದರೆ ವ್ಯಾಕರಣ, ಶಾಸನ, ಸಂಸ್ಕೃತಿ, ಚರಿತ್ರೆ, ಛಂದಸ್ಸು, ಜನಪದ, ಸಂಶೋಧನೆ, ಗ್ರಂಥಸಂಪಾದನೆ ಹೀಗೆ ವೈವಿಧ್ಯಮಯದೊಂದಿಗೆ ಹೆಸರುಗಳಿಸಿದವರು. 'ಕನ್ನಡ ಹಸ್ತಪ್ರತಿಶಾಸ್ತ್ರ' ಎಂಬ ಕಲಬುರ್ಗಿಯವರ ಗ್ರಂಥ ಹಸ್ತಪ್ರತಿಗಳನ್ನು ಶಾಸ್ತ್ರ ಚೌಕಟ್ಟಿಗೆ ಒಳಪಡಿಸಿದ ಪ್ರಪ್ರಥಮ ಕೃತಿ. ಕಲಬುರ್ಗಿಯವರು ಹಸ್ತಪ್ರತಿಶಾಸ್ತ್ರಕ್ಕೆ ನೀಡಿದಂತಹ ಕೊಡುಗೆ ಏನು? ಎಷ್ಟು? ಎಂಬುದರ ಜೊತೆಗೆ ಕಲಬುರ್ಗಿಯವರ ಜೀವನ ಚರಿತ್ರೆಯನ್ನೊಳಗೊಂಡು ಕಲಬುರ್ಗಿಯವರ ಪ್ರಕಾರ ಹಸ್ತಪ್ರತಿಶಾಸ್ತ್ರ ಮತ್ತು ಗ್ರಂಥಸಂಪಾದನೆಗಳ ನಿರ್ಮಾಣದ ಬಗೆಗೆ ವಿವೇಚಿಸಲಾಗಿದ್ದು, ಕಲಬುರ್ಗಿಯವರ ಹಸ್ತಪ್ರತಿಶಾಸ್ತ ಕೃತಿಯ ಸ್ವರೂಪದ ಬಗೆಗೂ ಈ ಸಂಪ್ರಬಂಧ ಚಿಂಚಿತವಾಗಿದೆ.

[1]"ಹಸ್ತಪ್ರತಿಶಾಸ್ತ್ರದ ವಿಷಯ ವ್ಯಾಪ್ತಿಯ ಬಗೆಗೆ ಅಭಿಪ್ರಾಯ ಭೇದಗಳಿವೆ. ಕೆಲವರು ಇದನ್ನು ಗ್ರಂಥಸಂಪಾದನೆಯ ಪೂರ್ವ ಭಾಗವಾಗಿ, ಒಂದು ಅಂಗಭಾಗವಾಗಿ ಹಿಡಿಯಬೇಕಲ್ಲದೆ, ಒಂದು ವಿಶಿಷ್ಟವಾದ, ಪ್ರತ್ಯೇಕವಾದ ಅಧ್ಯಯನ ವಿಷಯವನ್ನಾಗಿ ವಿಭಜಿಸಬೇಕಾಗಿಲ್ಲ ಎನ್ನುತ್ತಾರೆ. ಆದರೆ, ಹಸ್ತಪ್ರತಿಶಾಸ್ತ್ರಕ್ಕೆ ಅದರದೇ ಆದ ವಿಧಿ ವಿಧನಗಳು, ವ್ಯಾಪ್ತಿ-ವಿಸ್ತಾರಗಳು ಉಂಟು ಎನ್ನುವವರೂ ಇದ್ದಾರೆ. ಅವನ್ನು ಗುರ್ತಿಸುವುದು ವೈಜ್ಞಾನಿಕವಾಗಿ ಅಧ್ಯಯನ ಮಾಡುವುದು ಫಲಪ್ರದವಾದುವೆಂದು ಗ್ರಂಥಸಂಪಾದನೆಗೆ ಅದರ ಅನ್ವಯದಿಂದ ಖಚಿತತೆ ಸಾಧ್ಯವೆಂದು ಅವರು ಭಾವಿಸುತ್ತಾರೆ. ಇದನ್ನು ಒಪ್ಪಬಹುದಾಗಿದೆ."[1]

[2]"ಹಸ್ತಪ್ರತಿ ಸಂಗ್ರಹ, ಅವುಗಳ ಸೂಚಿ ರಚನೆ ಮೊದಲಾದವುಗಳನ್ನೊಳಗೊಂಡ "Manuscriptology" ಎಂಬ ಹೊಸ ಶಾಸ್ತ್ರವೇ ಬೆಳೆದು ಬರಬೇಕಾಗಿದೆ."[2] 1974 ರಂದು ಮಂಡ್ಯದಲ್ಲಿ ಜರುಗಿದ ಕನ್ನಡ ಸಾಹಿತ್ಯ ಸಮ್ಮೇಳನದ "ಸಾಹಿತ್ಯಶಾಸ್ತ್ರ ಗೋಷ್ಠಿ"ಯ ಅಧ್ಯಕ್ಷ ಸ್ಥಾನದಲ್ಲಿದ್ದ ಡಾ: ಆರ್.ಸಿ. ಹಿರೇಮಠ ರವರು ಈ ಶಾಸ್ತ್ರದ ಕಡೆಗೆ ಬೆರಳು ಮಾಡಿ ತೋರಿಸಿದರು. ಇದಕ್ಕೆ ಮೊದಲು 5-6 ಲೇಖನಗಳು ಹಸ್ತಪ್ರತಿಯ ಬಗೆಗೆ ಬಂದಿದ್ದರೂ ಕಲಬುರ್ಗಿಯವರು "

ಹಸ್ತಪ್ರತಿಶಾಸ್ತ್ರ: ವಿವಿಧ ಮುಖಗಳು" ಎಂಬ ಲೇಖನವು ಇಂದು ಹಸ್ತಪ್ರತಿಶಾಸ್ತ ಪರೋಕ್ಷವಾಗಿ ರೂಪುಗೊಳ್ಳುತ್ತಿದೆ. ಪ್ರತ್ಯಕ್ಷ ಶಾಸ್ತ್ರವಾಗಿ ರೂಪುಗೊಳ್ಳಬೇಕು. ಈ ಸಂಯೋಜನೆಯ ನೀಲ ನಕ್ಷೆಯಾಗಬೇಕಾದ ಈ ಲೇಖನ ಹಸ್ತಪ್ರತಿಶಾಸ್ತದ ಸಾರಲೇಖ (Synopsis) ವೂ ಆಗಬೇಕಾಗುತ್ತದೆ ಎಂದಿದ್ದಾರೆ.

ಎಂ.ಎಂ. ಕಲಬುರ್ಗಿಯವರು ಪ್ರಥಮ ಬಾರಿಗೆ ಪ್ರಕಟಿಸಿದ ಹಸ್ತಪ್ರತಿಯ ಬಗೆಗೆ ಅನೇಕ ಮಾಹಿತಿಗಳನ್ನು ಬಿಂಬಿಸುವ ಲೇಖನವಾದ "ಹಸ್ತಪ್ರತಿ : ಅದರ ವಿವಿಧ ಮುಖಗಳು" ಎಂಬ ಈ ಲೇಖನ ಹಸ್ತಪ್ರತಿಶಾಸ್ತದ ವಿವಿಧ ಮುಖಗಳು ಯಾವುವು ಎಂಬುದನ್ನು ಈ ರೀತಿಯಾಗಿ ವಿಂಗಡಿಸಬಹುದು.

1) ಹಸ್ತಪ್ರತಿ ಎಂದರೇನು ?
2) ಹಸ್ತಪ್ರತಿಯ ಲಕ್ಷಣಗಳು
3) ಹಸ್ತಪ್ರತಿಯ ಭಿತ್ತಿ ಚಿತ್ರಗಳು
4) ಹಸ್ತಪ್ರತಿಯ ಸ್ವರೂಪ
5) ಬರವಣಿಗೆಗೆ ಬಳಸುವ ಸಾಮಗ್ರಿಗಳು
6) ಹಸ್ತಪ್ರತಿಗಳ ಸಂಗ್ರಹಣೆ, ಸಂರಕ್ಷಣೆ
7) ಲಿಪಿಕಾರರು
8) ಹಸ್ತಪ್ರತಿಯಲ್ಲಿ ಉಂಟಾಗುವ ಸ್ಖಾಲಿತ್ಯಗಳು
9) ಲಿಪಿ ವೈವಿಧ್ಯ
10) ಆಕರಗಳು, ಸೂಚಿಗಳು

ಇನ್ನೂ ಮುಂತಾದವುಗಳ ಬಗೆಗೆ ಕಲಬುರ್ಗಿಯವರು ಮಾಹಿತಿ ನೀಡಿ ಮುಂದಿನ ಹಸ್ತಪ್ರತಿ ಶಾಸ್ತರೂಪೇನ ಮೂಡಿಬರಲು ಸಹಾಯಕರಾಗಿರುವುದನ್ನು ಇಲ್ಲಿ ಸ್ಮರಿಸಬಹುದು. ಇವುಗಳನ್ನು ಸೂಕ್ಷ್ಮ ರೂಪದಲ್ಲಿ ಈ ಸಂಪ್ರಬಂಧ ಬಿಂಬಿಸುವ ಸಾಧ್ಯತೆಗಳಿದ್ದರೂ ಇನ್ನೂ ಹೆಚ್ಚಿನ ಮಾಹಿತಿಗಳ ಸಂಗ್ರಹ ಅಗತ್ಯವೆನಿಸುತ್ತದೆ. ಕಲಬುರ್ಗಿಯವರು ಕನ್ನಡ ಹಸ್ತಪ್ರತಿಗಳ ಶೋಧಕ್ಕಾಗಿ 1982 ಅಕ್ಟೋಬರ್ 14 ರಿಂದ ನವೆಂಬರ್ 26 ರ ವರೆಗೆ 6 ವಾರಗಳ ಕಾಲ ಇಂಗ್ಲೆಂಡ್‌ನಲ್ಲಿ ಅನೇಕ ಗ್ರಂಥಾಲಯಗಳಿಗೆ ಭೇಟಿ ನೀಡಿ ಹಸ್ತಪ್ರತಿಗಳನ್ನು ಸಂಗ್ರಹಿಸಿದ ಮಾಹಿತಿಗಳು ಈ ಸಂಪ್ರಬಂಧದಲ್ಲಿದ್ದು. ಕಲಬುರ್ಗಿಯವರ ಸಂಶೋಧನೆಯಲ್ಲಿ ವಿದೇಶಿ ಸಂಶೋಧನೆಗಳ ಜೊತೆಯಲ್ಲಿ ಸ್ವದೇಶಿ ಸಂಶೋಧನೆಗಳು ಎಂಬ ಪ್ರತ್ಯೇಕ ಅಧ್ಯಯನ ಮಾಡುವ ಅವಕಾಶಗಳಿವೆ. ಕಲಬುರ್ಗಿಯವರು ಯಾವ ಯಾವ ಗ್ರಂಥಾಲಯಗಳಿಗೆ ಭೇಟಿ ನೀಡಿ ಯಾವ ರೀತಿಯ

ಹಸ್ತಪ್ರತಿಗಳನ್ನು ಶೋಧಿಸಿದರೆಂಬುದರ ಮಾಹಿತಿ ಪಡೆಯುವಲ್ಲಿ ಈ ಸಂಪ್ರಬಂಧ ಸಹಾಯಕವಾಗಿದೆ.

ಕಲಬುರ್ಗಿಯವರ ಹಸ್ತಪ್ರತಿಶಾಸ್ತ್ರ ಸ್ವರೂಪದಲ್ಲಿ ಹಸ್ತಪ್ರತಿಶಾಸ್ತ್ರದ ಅರ್ಥಗಳನ್ನು, ಲೇಖನ ಸಾಮಗ್ರಿ, ಲೇಪನ ಸಾಮಗ್ರಿ, ಲಿಪಿಕಾರರ ಬಗೆಗೆ ಲಿಪಿಯಲ್ಲಿ ಉಂಟಾಗುವ ಸ್ಖಾಲಿತ್ಯಗಳ ಬಗೆಗೆ, ಪುರುಷ ಲಿಪಿಕಾರರಲ್ಲದೆ ಸ್ತ್ರೀಲಿಪಿಕಾರರ ಬಗೆಗೂ ವಿವೇಚಿಸುವುದಲ್ಲದೆ ಜೈನ, ವೈದಿಕ, ವೀರಶೈವ ಹಸ್ತಪ್ರತಿಗಳು ಎಂಬುದಾಗಿ ವಿಂಗಡಿಸಿರುವ ಮಾಹಿತಿ ಲಭ್ಯವಾಗುತ್ತದೆ.

ಗ್ರಂಥಸಂಪಾದನೆ, ಹಸ್ತಪ್ರತಿಗಳ ನಿರ್ಮಾಣ ಕಾರ್ಯದಲ್ಲಿ ಕಲಬುರ್ಗಿಯವರು ನೀಡಿದ ಅಂಶಗಳನ್ನು ಈ ಸಂಪ್ರಬಂಧದಲ್ಲಿ ಒಳಪಡಿಸಲಾಗಿದ್ದು ಕನ್ನಡ ಗ್ರಂಥಸಂಪಾದನೆಯಲ್ಲಿ ರೂಪಿಸಲಾದ ಕೆಲವು ಸಿದ್ಧಾಂತಗಳನ್ನು ಇಲ್ಲಿ ಅಭ್ಯಸಿಸಬಹುದಾಗಿದೆ. ಒಂದು ಗ್ರಂಥವನ್ನು ರೂಪಿಸುವಲ್ಲಿ ಹಸ್ತಪ್ರತಿಗಳು ಯಾವ ರೀತಿ ಸಹಾಯಕವಾಗಿವೆ, ಹಸ್ತಪ್ರತಿಗಳ ಸಹಾಯದಿಂದ ಗ್ರಂಥಗಳನ್ನು ಹೇಗೆ ಸಂಪಾದಿಸಬಹುದು ಎಂಬುದರ ಚಿತ್ರಣ ಇಲ್ಲಿದೆ.

ಹಸ್ತಪ್ರತಿಶಾಸ್ತ್ರವನ್ನು ಯಾವ ನಿಟ್ಟಿನಲ್ಲಿ ಅಧ್ಯಯನ ಮಾಡಬಹುದು, ಅದಕ್ಕೆ ಸರ್ಕಾರಿ, ಖಾಸಗಿ ಸಂಘ ಸಂಸ್ಥೆಗಳ ವ್ಯಾಪ್ತಿಯಿಂದ ಹಸ್ತಪ್ರತಿಗಳನ್ನು ಕಲೆಹಾಕಿ ಮುಂದಿನ ಪೀಳಿಗೆಗೆ ಹಸ್ತಪ್ರತಿಶಾಸ್ತ್ರ ಅಧ್ಯಯನಕ್ಕೆ ಯಾವ ರೀತಿ ಸೂಕ್ತ ಕ್ರಮ ಕೈಗೊಳ್ಳಬಹುದೆಂಬುದರ ಬಗೆಗೆ ಸಮಾಲೋಚಿಸಲಾಗಿದೆ.

ಡಾ: ಕಲಬುರ್ಗಿಯವರು ಹಸ್ತಪ್ರತಿಶಾಸ್ತ್ರಕ್ಕೆ ಕೊಟ್ಟ ಕೊಡುಗೆ ಏನೆಂಬುದನ್ನು ಈ ಸಂಪ್ರಬಂಧದಲ್ಲಿ ಚರ್ಚಿಸಲಾಗಿದ್ದು ಅಂತಹ ವ್ಯಕ್ತಿಗೆ ಧನ್ಯವಾದಗಳನ್ನು ಅರ್ಪಿಸುವ ಮೂಲಕ ಈ ಸಂಪ್ರಬಂಧವನ್ನು ಸಮಾರೋಪಿಸಲಾಗುವುದು.

* * *

## ಅಡಿಟಿಪ್ಪಣಿಗಳು

ಹಸ್ತಪ್ರತಿಶಾಸ್ತ್ರ ವಿವೇಚನೆ

ನಾ. ಗೀತಾಚಾರ್ಯ

ಪುಟ – xiv

2. ಕನ್ನಡ ನುಡಿ

ಪುಟ : 37-14

## ಆಕರ ಗ್ರಂಥ ಸೂಚಿ

1. ಎಚ್. ದೇವಿರಪ್ಪ

1977 – 1999

ಕನ್ನಡ ಹಸ್ತಪ್ರತಿಗಳ ಇತಿಹಾಸ

ಕನ್ನಡ ಸಾಹಿತ್ಯ ಪರಿಷತ್ತು

ಬೆಂಗಳೂರು.

2. ಡಾ: ಎಸ್.ಎಂ. ಕತ್ರೆ

1968

ಭಾರತೀಯ ಗ್ರಂಥಸಂಪಾದನ ಪರಿಚಯ

ಹರ್ಷವರ್ಧನ ಪ್ರಕಾಶನ

ಬೆಂಗಳೂರು

3. ಡಾ: ಎಂ.ಎಂ. ಕಲಬುರ್ಗಿ

1993

ಕನ್ನಡ ಹಸ್ತಪ್ರತಿಶಾಸ್ತ

ಸ್ನೇಹ ಪ್ರಕಾಶನ

ಬೆಂಗಳೂರು.

4. ಡಾ: ಎಂ.ಎಂ. ಕಲಬುರ್ಗಿ

1972

ಕನ್ನಡ ಗ್ರಂಥಸಂಪಾದನ ಶಾಸ್ತ್ರ

ಸಿರಿಗನ್ನಡ ಪ್ರಕಾಶನ

ಧಾರವಾಡ.

5. ಡಾ: ಎಂ.ಎಂ. ಕಲಬುರ್ಗಿ
1992, 1995, 2001, 2002
ಕನ್ನಡ ಸಂಶೋಧನಾ ಶಾಸ್ತ್ರ
ಸ್ನೇಹ ಪ್ರಕಾಶನ
ಬೆಂಗಳೂರು.

6. ಡಾ: ಎಂ.ಎಂ. ಕಲಬುರ್ಗಿ
1988
ಮಾರ್ಗ ಸಂಪುಟ -1
ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾನಿಲಯ
ಧಾರವಾಡ.

7. ಡಾ: ಎಂ.ಎಂ. ಕಲಬುರ್ಗಿ
1998
ಮಾರ್ಗ ಸಂಪುಟ -2
ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾನಿಲಯ
ಧಾರವಾಡ.

8. ಡಾ: ವಿರೇಶ ಬಂಡಿಗೇರ
2006
ಕನ್ನಡ ಹಸ್ತಪ್ರತಿಗಳ ಬಹು ಪಠ್ಯೀಯ ನೆಲೆಗಳು
ಕನ್ನಡ ವಿಶ್ವವಿದ್ಯಾನಿಲಯ, ಹಂಪಿ
ವಿದ್ಯಾರಣ್ಯ.

9. ಡಾ: ವೈ.ಸಿ. ಭಾನುಮತಿ
ಕನ್ನಡ ಹಸ್ತಪ್ರತಿ – ಗ್ರಂಥಸಂಪಾದನೆ

10. ಡಿ.ಎಲ್. ನರಸಿಂಹಾಚಾರ್ಯ
1970
ಕನ್ನಡ ಗ್ರಂಥಸಂಪಾದನೆ
ಶಾರದಾ ಮಂದಿರ
ಮೈಸೂರು.

11. ಡಾ: ಬಿ.ಕೆ. ಹಿರೇಮಠ
ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ
1992
ವೀರಶೈವ ಅಧ್ಯಯನ ವೇದಿಕೆ
ಜಿ. ವಿಜಾಪೂರ.

12. ನಾ. ಗೀತಾಚಾರ್ಯ
2000
ಹಸ್ತಪ್ರತಿಶಾಸ್ತ್ರ ವಿವೇಚನೆ
ಸ್ನೇಹನಿಧಿ ಬಳಗ
ಬೆಂಗಳೂರು.

13. ಪ್ರೊ: ಎಂ.ವಿ. ಸೀತಾರಾಮಯ್ಯ
ಪ್ರೊ: ಚಿದಾನಂದಮೂರ್ತಿ
ಹಸ್ತಪ್ರತಿಶಾಸ್ತ್ರ

14. ಪ್ರೊ: ಎಂ.ವಿ. ಸೀತಾರಾಮಯ್ಯ
1975
ಶಾಸ್ತ್ರ ಸಾಹಿತ್ಯ

15. ಪ್ರೊ: ಡಿ.ವಿ. ಗುಂಡಪ್ಪ
1967
ಜೀವನ ಸೌಂದರ್ಯ ಮತ್ತು ಸಾಹಿತ್ಯ

16. ಹಸ್ತಪ್ರತಿಶಾಸ್ತ್ರ

1983

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ

ಬೆಂಗಳೂರು

17. ಬಿ.ಎಸ್. ಸಣ್ಣಯ್ಯ

1992

ಹಸ್ತಪ್ರತಿಶಾಸ್ತ್ರ ಪರಿಚಯ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ

ಬೆಂಗಳೂರು

18. ಬಿ.ಎಸ್. ಸಣ್ಣಯ್ಯ

1971

ಗ್ರಂಥ ಸಂರಕ್ಷಣೆ

ಪ್ರಸಾರಂಗ

ಮೈಸೂರು ವಿಶ್ವವಿದ್ಯಾಲಯ

ಮೈಸೂರು.

19. ಬಸವಲಿಂಗ ಸೊಪ್ಪಿಮಠ

ಸಾಹಿತ್ಯ ಸಂಶೋಧನೆ

ವೀರಶೈವ ಅಧ್ಯಯನ ಸಂಸ್ಥೆ

ಗದಗ.

20. ಬಿ.ವ್ಹಿ. ಶಿರೂರ

ಸಿರಿಸಂಪದ

ಅಭಿನಂದನಾ ಗ್ರಂಥ

21. ಸದಾನಂದ ಕನವಳ್ಳಿ

ವೀರಣ್ಣ ರಾಜೂರ

1998

ಮಹಾಮಾರ್ಗ

(ಕಲಬುರ್ಗಿಯವರ ಅಭಿನಂದನಾ ಗ್ರಂಥ)
ವೀರಶೈವ ಅಧ್ಯಯನ ಸಂಸ್ಥೆ
ಗದಗ.

22. ಸೀತಾರಾಮ್ ಜಾಗೀರದಾರ್
1978
ಗ್ರಂಥಸಂಪಾದನ ಶಾಸ್ತ್ರ ಪರಿಚಯ
ಕನ್ನಡ ಸಾಹಿತ್ಯ ಸಂಘ
ರಂಗಂಪೇಟೆ (ಸುರಪುರಂ)

23. ಸಾಪ್ತಾಹಿಕ ಪುರವಣಿ
31, ಡಿಸೆಂಬರ್ 2006
ನರಹಳ್ಳಿ ಬಾಲಸುಬ್ರಹ್ಮಣ್ಯ
ಕಲಬುರ್ಗಿಯವರ ಸಂದರ್ಶನ

24. 'ಲೋಚನ' (ಅರ್ಧವಾರ್ಷಿಕ)
ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ
ಬೆಂಗಳೂರು.

25. ಕನ್ನಡ ನುಡಿ (ನಿಯತಕಾಲಿಕೆ)

26. ಕರ್ನಾಟಕ ಭಾರತಿ (ನಿಯತಕಾಲಿಕೆ)



ಡಾ: ಎಂ.ಎಂ. ಕಲಬುರ್ಗಿಯವರು



ಕ.ವಿ.ವಿ.ಘಟಿಕೋತ್ಸವದಲ್ಲಿ
ಆರ್ಟ್ಸ್ ಫಾಕಲ್ಟಿ ಡೀನರಾಗಿ
ಸ್ನಾತಕೋತ್ತರ ಪದವಿ ಪ್ರಧಾನ
ಸಂಪುಟ-2



-ಮಾರ್ಗ ಸಂಪುಟ-2 ಬಿಡುಗಡೆ



ಸಂಶೋಧಕರು : ಡಾ ॥ ವೆಂಕಟಾಚಲಶಾಸ್ತ್ರಿ
ಡಾ ॥ ಕಲಬುರ್ಗಿ,
ಚಿದಾನಂದ ಮೂರ್ತಿ



ಎಂ.ಎಂ. ಕಲಬುರ್ಗಿಯವರ
ಮಾರ್ಗ ಸಂಪುಟ ಬಿಡುಗಡೆ :
ಡಾ ॥ ದೆ.ಜ.ಗೌ. ಮತ್ತು ಆರ್.ಸಿ.ಹರೇಮಠ



ಲಂಡನ್ನಿನ ಬ್ರಿಟಿಷ್ ಲೈಬ್ರರಿಯ ಕನ್ನಡ
ವಿಭಾಗದ ನಿರ್ದೇಶಕಿ ಆಲ್‌ಬರ್ಟಿನ್ ಮತ್ತು
ಕಲಬುರ್ಗಿ

